“ What is Art ? Nature Concentrated ”

—BALZAC

# ಉದಯರಾಗ

ಅ. ನ. ಕೃಷ್ಣರಾಯ



ಆನಂದ್ ಬ್ರದರ್ಸ್
ಬೆಂಗಳೂರು ೨.

ಮೊದಲನೆಯ ಮುದ್ರಣ : ೧೯೩೪
ಎರಡನೆಯ ಮುದ್ರಣ : ೧೯೪೪
ಮೂರನೆಯ ಮುದ್ರಣ : ೧೯೪೮
ನಾಲ್ಕನೆಯ ಮುದ್ರಣ : ೧೯೫೧





ಮುದ್ರಣಕಾರರು :
ವಿ. ರಾಮಯ್ಯ
ಶ್ರೀ ಸತ್ಯನಾರಾಯಣ ಪ್ರೆಸ್,
೬೩, ಗೌಡನಪೇಟೆ, :: ಬೆಂಗಳೂರು ೨.

# ಮುನ್ನುಡಿ

---

ಹದಿನೇಳು, ವರ್ಷಗಳ ಹಿಂದೆ ನಾನು ಬರೆದ 'ಉದಯರಾಗ' ನಾಲ್ಕನೆಯ ಮುದ್ರಣ ಕಾಣುತ್ತಿರುವುದು ನನಗೆ ಸಂತೋಷವನ್ನುಂಟು ಮಾಡಿದೆ. ಈ ಸಂತೋಷದ ಕಾರಣಕರ್ತರು ಮೆಸರ್ಸ್ ಆನಂದ್ ಬ್ರದರ್ಸ್ ಕಂಪೆನಿಯವರು. ಅವರಿಗೂ ಪುಸ್ತಕವನ್ನು ಅಂದವಾಗಿ ಅಚ್ಚುಹಾಕಿರುವ ಶ್ರೀ ಸತ್ಯನಾರಾಯಣ ಪ್ರೆಸ್ ಒಡೆಯರಿಗೂ ನನ್ನ ಧನ್ಯವಾದಗಳನ್ನರ್ಪಿಸುತ್ತೇನೆ.

"ನಾನೇ ಈಗ 'ಉದಯರಾಗ' ಓದುವಾಗ ಕೆಲಕೆಲ ವಿಚಾರಗಳ ಹೊಳೆಯುವುದು ಸ್ವಾಭಾವಿಕ. ಕಲೆಯ ಬಗ್ಗೆ ಆಗ್ಗೆ ನಾನು ವ್ಯಕ್ತಪಡಿಸಿದ ಅಭಿಪ್ರಾಯಗಳು, ಸಮಾಜ, ವ್ಯಕ್ತಿ, ಜೀವನದ ಬಗ್ಗೆ ನನ್ನ ಅಭಿಪ್ರಾಯಗಳು ಅನುಭವದಿಂದ ಹೆಚ್ಚು, ನಿಷ್ಕೃಷ್ಟವಾಗಿವೆಯೆನ್ನುವುದು ಸ್ವತಃಸ್ಸಿದ್ಧ. ಆದರೆ ಕಿಶೋರಾವಸ್ಥೆಯ ಕೆಚ್ಚು, ಕಾವು, ಅನ್ಯಾಯವನ್ನು ಕಂಡು ಸಹಿಸಲಾಗದ ಅಸಹನೆ ಕಾದಂಬರಿಗೆ ಒಂದು ಕಳೆಯನ್ನಿತ್ತಿದೆಯೆಂದನಿಸುತ್ತದೆ. ಪಾತ್ರಗಳು ಬಹಳ ಗಂಭೀರವಾದ, ಉದಾತ್ತವಾದ ವಿಷಯಗಳನ್ನಾಲೋಚಿಸುತ್ತವೆ. ಅವುಗಳಲ್ಲಿ ಒಂದು ಬಗೆಯ ಮುಗ್ಧಮಾಧುರ್ಯವಿದೆ. ಮಗುವಾಡುವ ದೊಡ್ಡ ಮಾತುಗಳನ್ನು ಕೇಳಿ ಹಿರಿಯರ ತುಟಿಯ ಮೇಲೆ ಮಿನುಗುವ ನಗೆಯ ನೆನಪು ತರುತ್ತದೆ. ಆದರದು ತಿರಸ್ಕಾರದ ನಗೆಯಲ್ಲ! ಮಗು ತನ್ನ ವಯೋಧರ್ಮಾನುಗುಣವಾಗಿ ವಿಚಾರ ಮಾಡಬೇಕಾದುದು ಸಹಜ. ಆದರೆ ಅದು ವಯಸ್ಸಿಗೆ ಮಿಕ್ಕ ವಿಚಾರಗಳನ್ನು ಕುರಿತು ಚಿಂತಿಸಿದರೆ ವ್ಯಥೆಪಡಬೇಕೇ ?

'ಉದಯರಾಗ' ಕಾದಂಬರಿಯನ್ನು ೧೯೩೪ ರಲ್ಲಿ ಬರೆದ ಬರೆಹಗಾರನ ದೃಷ್ಟಿ ಬಹಳ ದೊಡ್ಡದೆಂದು ಓದುಗರಿಗೆ ತಿಳಿದಿರಬಹುದು. ಅಂದು ಅವನು ಇದಕ್ಕಿಂತ ಒಳ್ಳೆಯದಾದ ಕೃತಿ ರಚಿಸಲಿಲ್ಲವಲ್ಲಾ ಎಂದು ಕೆಲ ಸಹೃದಯರು ಯೋಚಿಸಿರಲೂ ಬಹುದು. ಆದರೆ ಕನ್ನಡ ಕಾದಂಬರಿ ಪ್ರಪಂಚ ಇನ್ನೂ ಕಣ್ಣುಬಿಡುತ್ತಿದ್ದ ಕಾಲದಲ್ಲಿ 'ಉದಯರಾಗ' ಹೊರಬಿದ್ದಿತೆಂಬುದನ್ನು ಓದುಗರು ಮರೆಯದಿದ್ದರೆ ಸಾಕು."

ಇಷ್ಟು ದೀರ್ಘಕಾಲಾನಂತರ 'ಉದಯರಾಗ' ಓದುವಾಗ ಓದುಗರ ಮನಸ್ಸಿನಲ್ಲಿ ಬಗೆಬಗೆಯ ಭಾವನೆಗಳೇಳುವಂತೇ ನನ್ನ ಮನಸ್ಸಿನಲ್ಲಿಯೂ ಏಳುವುದು ಸ್ವಾಭಾವಿಕ.

ಯಾವ ಪರಂಪರೆ – ಸಂಸ್ಕೃತಿಯ ಪ್ರಭಾವದಿಂದಲೋ ನಾನು ಲೇಖನ ವೃತ್ತಿ ಕೈಗೊಂಡ ದಿನದಿಂದಲೇ ನನ್ನ ಮನಸ್ಸಿನ ಮೇಲೆ ಕೆಲವು ವಿಚಾರಗಳು ಪ್ರಭಾಮುದ್ರೆಯನ್ನೊತ್ತಿದ್ದವು. ಅವುಗಳಲ್ಲಿ 'ಅನುಕಂಪ'ವೂ ಒಂದು. ಸಮಾಜದ ವ್ಯವಸ್ಥೆಗೆ, ವ್ಯಕ್ತಿಯ ಉತ್ಕ್ರಾಂತಿಗೆ ಅನನುಗುಣವಾಗಿ ಹಲವರು ತಪ್ಪುದಾರಿ ಹಿಡಿಯುತ್ತಾರೆ. ಇದಕ್ಕೆ ಅವರ ಮಾನಸಿಕ ಗುಣವೆಷ್ಟು ಕಾರಣವೋ ಪರಿಸ್ಥಿತಿಯೂ ಅಷ್ಟೇ ಕಾರಣವಾಗುತ್ತದೆ. ವ್ಯಕ್ತಿ 'ಇಂಥದು ಸತ್ಯ' ಎಂದು ಅರ್ಥ ಮಾಡಿಕೊಳ್ಳುವುದು ಕಷ್ಟ – ಅದು ಅಪಾರ ಸಾಧನೆಯಿಂದ ದೊರೆಯುವ ಸಿದ್ಧಿ; ಆದರೆ 'ಇಂಥದು ಸತ್ಯ'ವೆಂದು ಅರಿತಮೇಲೆ ಅದನ್ನು ಕಾರ್ಯರೂಪಕ್ಕೆ ತರಬಲ್ಲವರು ಮತ್ತೂ ವಿರಳ. ಇದು ಮಾನವನ ಸಹಜ ದೌರ್ಬಲ್ಯದ ಪ್ರತೀಕ. ಮಾನವ ದುರ್ಬಲತೆಗೆ ಅಧೀನನಾಗಿ ತನ್ನ ದಿವ್ಯಶಕ್ತಿಯನ್ನು ನೀಗಿಕೊಳ್ಳದಂತೆ ಅವನನ್ನು ಮೇಲಕ್ಕೆತ್ತಿ ಹಿಡಿಯುವ ಮಹಾಶಕ್ತಿ 'ಅನುಕಂಪ'ಕ್ಕಿದೆ. ಬುದ್ಧ, ಯೇಸು, ರಾಮಕೃಷ್ಣ, ಗಾಂಧಿಯವರ ಜೀವನದಲ್ಲಿ ಈ ಶಕ್ತಿಯ ವಿವಿಧ ರೂಪರೇಷೆಗಳನ್ನು ನಾವು ನೋಡಬಹುದು.

ನನ್ನ ವಿಚಾರ ಸರಣಿಯ ಕಣಗಳನ್ನು ಓದುಗರು 'ಉದಯರಾಗ'ದಲ್ಲಿ ಕಾಣಬಹುದು. ಅದರ ವಿಸ್ತರಣವನ್ನು ಇತರ ಕಾದಂಬರಿಗಳಲ್ಲಿ ಕಾಣಬಹುದು.

ಪಾಪದ ಬಗೆ ಅನುಕಂಪ ತೋರುವವನು ಪರ್ಯಾಯವಾಗಿ ಅದರ ಪಾಲುಗಾರನಾಗುವುದಿಲ್ಲವೇ ? ಪಾಪಿಗೆ ತೋರುವ ಸಹಾನುಭೂತಿ, ಪಾಪಕ್ಕೆ

ತೋರುವ ಸಹಾನುಭೂತಿಯೂ ಆಗುವುದಿಲ್ಲವೇ ಎಂಬ ಪ್ರಶ್ನೆಯನ್ನು ಹಲವು ಓದುಗರು ನನ್ನನ್ನು ಕೇಳಿದ್ದಾರೆ. ಇದು ಅನುಭಾವಕ್ಕೆ ಸಂಬಂಧ ಪಟ್ಟ ಪ್ರಶ್ನೆ. ಮಾತಿನ ಮಂಥನದಿಂದ ಒಪ್ಪಿಗೆ ದೊರಕಿಸುವುದು ಕಷ್ಟ ಸಾಧ್ಯ. ಹಿರಿಯರ ಆಚರಣೆ, ಉಪದೇಶದ ಕಡೆಗೆ ಜಿಜ್ಞಾಸುಗಳಾದ ಓದುಗರನ್ನೆಳೆದು ತೃಪ್ತನಾಗುತ್ತೇನೆ. ಯೇಸು, ಕಬೀರರು ಕೀಳು ಜನರ ವೇಶ್ಯೆಯರ ಸಹವಾಸದಲ್ಲಿರುತ್ತಿದ್ದರು. ಅವರ ಮೇಲೆ ಆಕ್ಷೇಪಣೆ ಬಂದಾಗ ಅವರು ಹೇಳಿದರು 'ಹಾವಿನ ಹಲ್ಲ ಕಳೆವೊಡೆ, ಹಾವಿನ ಸಂಗವೇ ಲೇಸಯ್ಯ' ಎಂದು. ಮಾನವಾತ್ಮ – ಯಾವದೇ ಇರಲಿ – ಯಾರದೇ ಇರಲಿ ಭಗವಂತನ ಭದ್ರಪೀಠ. ಪುಣ್ಯಶೀಲನ ಹೃದಯಸ್ಥಲದಲ್ಲಿ ಸತ್ - ಚಿತ್ - ಆನಂದ ಸುಪ್ತವಾಗಿ ಅಡಗಿರುವಂತೆ ಪಾಪಿಯ ಹೃದಯದಲ್ಲಿಯೂ ಅವು ನೆಲಸಿರುತ್ತವೆ. ಆದರೆ ಪ್ರಚೋದನೆಯಿಲ್ಲದೆ ಅವು ಜಡವಾಗಿ ಬಿದ್ದಿರುತ್ತವೆ. ಈ. ಪ್ರಚೋದನೆ ಒದಗುವುದು ಹೇಗೆ? ಪಾಪಿ ಎಂದು ಕರೆದು ಒಬ್ಬನನ್ನು ನಾವು ಪಪಾತಕ್ಕೆ ತಳ್ಳುತ್ತ ಹೋಗೋಣವೋ, ಅವನ ವಿಸ್ಮೃತಿಯನ್ನು ಸ್ನೇಹ ಸಹಾನುಭೂತಿಗಳಿಂದ ಹೋಗಲಾಡಿಸಿ ಅವನಿಗೆ ಅವನಲ್ಲಿಯೇ ಇರುವ 'ಸಚ್ಚಿದಾನಂದ'ನ ದರ್ಶನವನ್ನು ಮಾಡಿ ಸೋಣವೋ?

ನನ್ನ ಕೃತಿಗಳನ್ನು ಓದಿನೋಡಿ ನಾನು ಪಾಪದೊಂದಿಗೆ ಪಾಲುಗಾರ ನಾಗಿರುವೆನೆಂದು ಜನ ಆಕ್ಷೇಪಿಸಿದರೂ ಚಿಂತೆಯಿಲ್ಲ. ನಾನು ಯಾರನ್ನೂ ಹಳಿಯಲು – ತುಳಿಯಲು ಸಿದ್ಧನಾಗಿಲ್ಲ. ಲೋಕದ ಎಲ್ಲ ದುಃಖಿಗಳ, ಎಲ್ಲ ಕಣ್ಣೀರನ್ನೂ ತೊಡೆಯುವ ಶಕ್ತಿ ನನಗಿದೆಯೋ ಇಲ್ಲವೋ – ನಾಲ್ಕು ಜನ ದುಃಖಿಗಳಿಗೆ ನನ್ನ ಕೃತಿಗಳಿಂದ ಸ್ವಲ್ಪ ಶಾಂತಿ, ಸಮಾಧಾನ, ಧೈರ್ಯ ವೊದಗಿದರೆ ನಾನು ಧನ್ಯ.

"ಅನ್ನಪೂರ್ಣ"
ವಿಶ್ವೇಶ್ವರಪುರ, ಬೆಂಗಳೂರು ೨.
೧೦–೧–೧೯೫೧

ಅ. ನ. ಕೃಷ್ಣರಾಯ

" May a time it has been said that art under all its forms is only the mirror, more are less distorted, yet always faith full. of society. To day it reflects the discouragements of a dying **bourgeoisie**, the torments, the anguish, and also the hopes of a proletariat which lives and grows in the midst of suffering. To morrow it will reflect the calm and peace of happy generations which, escaped from the mire of poverty, will have founded through their own efforts the sovereignty of labor ond the reign of brotherhood."

*EMILE VANDERVELDE in "The Future of Art"*

# ಉದಯರಾಗ

೧

ಮುಕುಂದರಾಯರ ಎದುರಿಗಿದ್ದ ದೊಡ್ಡ ಅನ್‌ಸೋನಿಯಾ ಗಡಿಯಾರಕ್ಕೂ ಅವರ ಮನಸ್ಸಿಗೂ ಪುಟ್ಟ ಕಾಳಗವೇ ಸಾಗಿತ್ತು. ಮನಸ್ಸು ಆಮೆ - ಮೊಲದ ಕತೆಯಂತೆ ಮುಂದೆ ಮುಂದೆ ಓಡಿಹೋಗಿ ಹೆಮ್ಮೆಯಿಂದ ಅಲ್ಲೇ ಒಂದು ಘಳಿಗೆ ನಿಂತುಬಿಡುವುದು; ಆ ಸಮಯವನ್ನೇ ಸಾಧಿಸಿ ಕೊಂಡಿದ್ದ ಗಡಿಯಾರ ಕುಂಟುತ್ತ ಕುಂಟುತ್ತಲೇ ಅದಕ್ಕಿಂತ ಮುಂದೆ ಹೋಗಿಬಿಡುವುದು. ಈ ಸ್ಪರ್ಧೆಯನ್ನು ನೋಡುತ್ತಾ ರಾಯರು ತಮಗೆ ಅತ್ಯಂತ ಪ್ರಿಯವಾದ ಮಂಗಳೂರು ಬೀಡಿಯನ್ನು ಹಚ್ಚಿ ಸೇದುತ್ತಾ ಆರಾಮಾಸನದ ಮೇಲೆ ಕುಳಿತಿದ್ದರು. ದುಡಿಮೆಯಿಂದ ದಣಿದಿದ್ದ ದೇಹವನ್ನು ಬೀಡಿ ಹಗುರ ಮಾಡದಿದ್ದರೂ ಮನಸ್ಸಿನ ಆತಂಕವನ್ನು ಕ್ಷಣಕಾಲವಾದರೂ ಮರೆಸಿ ಅದನ್ನು ತುಸು ಹಗುರ ಮಾಡಿತ್ತು. ಮಧ್ಯೆ ಮಧ್ಯೆ ನಾಳಿನ ಚಿಂತೆ ಮೂಡಿ ರಾಯರ ಶಾಂತಿಗೆ ಭಂಗ ಬರುತ್ತಿತ್ತು.

ರಾಯರು ಜೀವನದ ಕಹಿ - ಸಿಹಿಗಳನ್ನು ಚೆನ್ನಾಗಿ ಉಪಭೋಗಿ ಸಿದ್ದರು. ಅಂತೇ ಅವರಿಗೆ ಗೆಳೆತನದ ಭವ್ಯತೆ ಚೆನ್ನಾಗಿ ಮನವರಿಕೆಯಾಗಿ ದ್ದುದು. ಸಂಸಾರದ ಮತ್ತು ಅದಕ್ಕೆ ತುತ್ತು ಕಾಣಿಸುವ 'ಆನಂದ' ಪತ್ರಿಕೆಯ ಸಂಪಾದಕತನದ ಹೊರೆಯನ್ನು ಅವರಿಗಿಳುಹುತ್ತಿದ್ದುದು ರಮೇಶ, ಮೂರ್ತಿಯವರ ಗೆಳೆತನವೊಂದೇ. ಅದರ ರಕ್ಷಣಾರ್ಥವಾಗಿ ಅವರು ಏನು ಬೇಕಾದರೂ ಬಲಿದಾನ ಕೊಡಲು ಸಿದ್ಧರಾಗಿದ್ದರು. ಮುಕುಂದರಾಯರ ವಯಸ್ಸು ನಲವತ್ತು ದಾಟಿದ್ದರೂ ಅವರ ಅಂತಃಕರಣದ ಯೌವನ ರಮೇಶ, ಮೂರ್ತಿಯಂತಹ ಕಿರಿಯರ ಗೆಳೆತನವನ್ನು ಒಪ್ಪಿಕೊಂಡಿತ್ತು. ವಯಸ್ಸಿನ ದರ್ಪ ರಾಯರ ತಲೆಯ ಮೇಲೆ, ಮುಖದ ಮೇಲೆ ಬಿಳಿಯ ಬಣ್ಣದಿಂದ ಅಲ್ಪಸ್ವಲ್ಪವಾಗಿ ಕಾಣಿಸಿಕೊಳ್ಳಲಾರಂಭಿಸಿದ್ದರೂ ಅವರ ಮನಸ್ಸು ಆ ದರ್ಪಕ್ಕೆ ಅಣೆಕಟ್ಟನ್ನು ಹಾಕಿಬಿಟ್ಟಿತ್ತು.

ಆರು ಹೊಡೆಯುವ ಸಮಯವಾಗುತ್ತ ಬಂದಿದ್ದರೂ ಗೆಳೆಯರು ಬರುವ ಲಕ್ಷಣ ಕಂಡುಬರಲಿಲ್ಲ. ರಾಯರು ಅಂಗಿ, ಟೋಪಿ ಧರಿಸಿ ಚಲುವನನ್ನು ಕರೆದು ಕಛೇರಿಯ ಬಾಗಿಲು ಹಾಕಲಾಜ್ಞಾಪಿಸಿ ಹೊರಟರು. ಹತ್ತು ಹೆಜ್ಜೆಯಿಡುವಷ್ಟರಲ್ಲಿ ರಮೇಶ, ಮೂರ್ತಿಗಳ ಬೈಸಿಕಲ್ ಘಂಟೆಗಳ ನಿನಾದ ಕೇಳಬರಲು ರಾಯರು ಹಾಗೆಯೇ ನಿಂತು ಗೆಳೆಯರಿಬ್ಬರನ್ನೂ ದಿಟ್ಟಿಸಿ ನೋಡಿ ಮೆಲ್ಲನೆ ಮುಗುಳ್ನಗೆ ನಕ್ಕರು. ಛೇಡಿಸುತ್ತಲೇ ಬಂದಿದ್ದ ರಮೇಶನಿಗೆ ಈ ನಗೆಯ ಮರ್ಮ ಅರ್ಥವಾಗಲಿಲ್ಲ – ಮೆಲ್ಲನೆ ಮೂರ್ತಿಯ ಕಡೆ ತಿರುಗಿ ನೋಡಿದ – ಅದೇ ವೇಳೆಗೆ ಅವನೂ ಸಂದೇಹಗ್ರಸ್ತನಾಗಿ ರಮೇಶನ ಕಡೆ ತಿರುಗಿದ್ದ.

ರಾಯರೇ ಔದಾರ್ಯದಿಂದ ಮಾತು ತೆಗೆದರು "ಅಂತೂ ಆರು ಘಂಟೆಗಾದರೂ ಬಂದಿರಲ್ಲಾ ಮಹಾರಾಯರು."

"ನಾನೇನು ಮಾಡಲಿ ಮಾವಯ್ಯಾ. ಈ ಶನಿ ದಾರಿಯಲ್ಲಿ ತಡೆಹಾಕಿ ಕ್ರಿಕೆಟ್ ನೋಡಿಸುತ್ತಾ ನಿಲ್ಲಿಸಿಕೊಂಡ. ಅದಕ್ಕೇ ಇಷ್ಟು ಹೊತ್ತು" ಎಂದು ತುಂಟತನದಿಂದ ರಮೇಶ ಮೂರ್ತಿಯ ಕಡೆ ನೋಡಿದ. ಮೊದಲೇ ಕೆಂಪಗಿದ್ದ ಮೂರ್ತಿಯ ಮುಖ ಮತ್ತಷ್ಟು ಬಣ್ಣವೇರಿತು. ರಮೇಶ ಸಿಕ್ಕು ಹಾಕಿದ್ದ ತೊಡಕಿನಿಂದ ಬಿಡಿಸಿಕೊಳ್ಳಲಾರದೆ "ಇಲ್ಲ ಮಾವಯ್ಯಾ, ಇವನೇ ಆಟ ನೋಡುತ್ತಾ ನಿಂತ. ನಾನೇನು ಮಾಡಲಿ. ಕೋತಿ ತಿಂದು ಮೇಕೆ ಬಾಯಿಗೆ ಬಳಿದ ಹಾಗೆ ಮಾಡುತ್ತಿದ್ದಾನೆ."

"ಹೋಗಲಿ ಬನ್ನಿ. ನಾಳೆಯಿಂದ ಹೀಗೆ ಮಾಡಿ ಮುದುಕನನ್ನ ಗೋಳು ಹುಯ್ದುಕೊಳ್ಳಬೇಡಿ" ಎಂದು ರಾಯರು ಇಬ್ಬರು ಗೆಳೆಯರನ್ನೂ ಎದುರಿಗೆ ಕಾಣುತ್ತಿದ್ದ 'ಅಯ್ಯರ್ ಕಾಫೀ ಕ್ಲಬ್ಬಿ'ಗೆ ಎಳೆದೊಯ್ದರು. ಗೆಳೆಯರಿಬ್ಬರೂ ನಗುತ್ತಾ ರಾಯರ 'ಮುದುಕತನ'ವನ್ನೂ ಅವರ ಮನೆಯಲ್ಲಿದ್ದ – ಸಿದ್ಧವಾಗುತ್ತಿದ್ದ ಸೆನ್ಸಸ್ (Census) ಲೆಖ್ಖವನ್ನೂ ನೆನೆದುಕೊಳ್ಳುತ್ತಾ ಅಯ್ಯರ್ ಕ್ಲಬ್ಬಿನ ಜಿಡ್ಡು ಮೇಜಿನ ಮುಂದೆ ಕುಳಿತರು.

ನಿತ್ಯದಂತೆ ದೋಸೆಗೆ ಹೇಳಿದ್ದಾಯಿತು. ಅದು ಬರುವುದು ತಡವಾಗುತ್ತದೆಂದು ಉಪ್ಪೇರಿಯನ್ನು ಕುರುಕುತ್ತಾ ಕುಳಿತರು. ರಾಯರು ಉಪ್ಪೇರಿಯನ್ನು ಮಾತನಾಡದೆ ಮುಗಿಸುತ್ತಿದ್ದ ರೀತಿಯನ್ನೇ ನೋಡುತ್ತಾ

ಗೆಳೆಯರಿಬ್ಬರೂ ಅವರ 'ಮುದುಕತನ'ವನ್ನು ನೆನೆದು ಯೋಚಿಸುತ್ತಾ ಕುಳಿತಿದ್ದರು. ಈ ನೆನಹು ಸಾಕಾಗಿ ಮೂರ್ತಿ, ರಮೇಶ ತಂದಿದ್ದ 'ಕಲಾವಿದ' (Artist) ಪತ್ರಿಕೆಯ ಚಿತ್ರಗಳನ್ನು ನೋಡುತ್ತಾ ದೋಸೆಗೆ ಕಾಯುತ್ತಾ ಕುಳಿತಿದ್ದ. ಆ ಉಪಹಾರ ಮಂದಿರದ ಗಡಿಬಿಡಿಯಲ್ಲಿಯೂ ಕಲಾಚಿತ್ರಗಳನ್ನು ನೋಡಿ ಮೆಚ್ಚುತ್ತಾ ಕುಳಿತಿದ್ದ ಮೂರ್ತಿಯ ಚಿತ್ತೈಕಾಗ್ರತೆ ರಮೇಶನನ್ನು ಆಶ್ಚರ್ಯಚಕಿತನನ್ನಾಗಿ ಮಾಡಿತು. ಮೂರ್ತಿ ಚಿತ್ರ ನೋಡುತ್ತಿದ್ದವನು ಮುಕುಂದರಾಯರ ಕಡೆ ತಿರುಗಿ "ಇದು ನೋಡಿದೆಯಾ ಮಾವಯ್ಯಾ" ಎಂದು ಪತ್ರಿಕೆಯಲ್ಲಿದ್ದ ನಗ್ನಚಿತ್ರದ ಕಡೆ ಕೈ ತೋರಿದ.

ಮುಕುಂದರಾಯರು ಅದನ್ನು ಕಣ್ತುಂಬ ನೋಡಿ, ಕಣ್ಣು ಕೆರಳಿಸಿ, ಸುಳ್ಳು ಕೋಪವನ್ನು ಅಭಿನಯಿಸುತ್ತಾ "ಪೋಲೀ, ನಿನಗೇನು ಮಾಡುವುದಕ್ಕೆ ಕೆಲಸವಿಲ್ಲ ಎಂದು ಕಾಣುತ್ತದೆ. ನಗ್ನ ಚಿತ್ರಗಳನ್ನು ನೋಡಿಕೊಂಡು ಕಾಲ ಹಾಕು" ಎಂದು ಗದರಿಸಿದರು.

"ನಿಮಗೆ ನಗ್ನಚಿತ್ರವೆಂದರೆ ಮೈಯೆಲ್ಲಾ ಬೆಂಕಿ ಅಲ್ಲವೇ ಮಾವಯ್ಯಾ" ಎಂದು ರಮೇಶ ಮೆಲ್ಲನೆ ನುಡಿದ.

"ಮೈಯೆಲ್ಲಾ ಬೆಂಕಿಯೆಂದಲ್ಲ. ಅದಕ್ಕೂ ಹೊತ್ತೂ ಗೊತ್ತೂ ಬೇಡವೇ ರಮೇಶ. ಈ ಮೂರ್ತಿ ಶುದ್ಧ ಹುಡುಗ" ಎಂದು ಅವನ ಕಡೆ ನೋಡಿ ನಕ್ಕರು.

"ಮೊನ್ನೆ 'ಆನಂದ'ದಲ್ಲಿ ಪ್ರಕಟಿಸಿದ ಮುಜುಂದಾರನ 'ಕಳಿದ ಹೃದಯ' ಯಾರ ಅಭಿರುಚಿಗೆ ಸೇರಿದ್ದೋ?" ಎಂದು ಮೂರ್ತಿ ಮತ್ತೆ ಮುಕುಂದರಾಯರನ್ನು ಕೆಣಕಿದ.

ರಾಯರು ಉತ್ತರವನ್ನು ಸಿದ್ಧಮಾಡಿಕೊಂಡು ಮೂರ್ತಿಯನ್ನು ತಮ್ಮ ವಾದಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವಷ್ಟರಲ್ಲಿ "ಶುಡ ಶುಡಾ ದೋಸಾ" ಎದುರು ಬಂದು ಕುಳಿತಿತು. ರಾಯರು ವಾದ ಆಮೇಲೆ ಆಗಲೆಂದು ದೋಸೆಗೆ ಕೈಹಚ್ಚಿದರು.

"ಚಟ್ನಿ ಬೇಕೇ ಸಾರ್."

"ಬೇಡಪ್ಪಾ"

"ಬೆಣ್ಣೆ ಹಾಕಲೇ ಸಾರ್."

"ಬೇಡ – ಕಾಣಯ್ಯಾ" ಎಂದು ರಮೇಶ ಕತ್ತೆತ್ತಿ ನೋಡಿದ.

"ಏನು ಮಾಣಿ – ನೀನು ತಂದುಬಿಟ್ಟೆ."

"ಹೌದು ಸಾರ್. ರಾಮಯ್ಯರನ್ನ ಆ ಮೇಜಿಗೆ ಕಳುಹಿಸಿದೆ....... ಈ ಪೇಪರ್ ನೋಡಲೇ ಸಾರ್."

"ನೋಡು....ಆದರೆ ನಿನ್ನ ಕೈಯೆಲ್ಲಾ ತುಪ್ಪದ ಜಿಡ್ಡೇನೋ ?"

"ಇಲ್ಲಾ ಸಾರ್. ಚೆನ್ನಾಗಿ ಒರಸಿಕೊಂಡಿದ್ದೇನೆ........ನೋಡಿ ಸಾರ್...." ಎಂದು ಮೊದಲೆ ಜಿಡ್ಡು ಕವಿದಿದ್ದ ತನ್ನ ಬನೀನಿಗೆ ಕೈಯನ್ನು ಚೆನ್ನಾಗಿ ಉಜ್ಜಿ 'ಕಲಾವಿದ' ಪತ್ರಿಕೆಯನ್ನು ನೋಡುತ್ತಾ ನಿಂತ. ಮೂರ್ತಿ ಬಾಲಕನ ಆಸಕ್ತಿಯನ್ನು ಕಂಡು "ಹೇಗಿದೆ ಮಾಣಿ........ ಆರ್ಟಿಸ್ಟ್ ?"

"ಬಹಳ ಚೆನ್ನಾಗಿದೆ ಸಾರ್. ಇದು ಪ್ರತಿ ತಿಂಗಳೂ ಬರುತ್ತದೆಯೇ ಸಾರ್ ?"

"ಹೂ ಕಾಣಯ್ಯಾ."

"ಹಳೇವೆಲ್ಲಾ ನಾನು ಒಂದು ಸಲ ನೋಡಬೇಕಲ್ಲಾ ಸಾರ್."

"ಆಗಲಿ....ಯಾವಾಗಲಾದರೂ ನಮ್ಮ ಮನೆಗೆ ಬರುವೆಯಂತೆ. ಆಗ ಎಲ್ಲಾ ತೋರಿಸುತ್ತೇನೆ."

ಈ ಮೂವರು ಮಿತ್ರರಿಗೂ ಮಾಣಿಗೂ ಅವರ ಕಲಾಪತ್ರಿಕೆಗಳು ಒಂದು ಬಗೆಯ ಅನ್ಯೋನ್ಯತೆಯನ್ನು ಗಂಟುಹಾಕಿದ್ದವು. ತಾನು ಯಾವ ಮೇಜಿನ ಬಳಿ ಕೆಲಸ ಮಾಡುತ್ತಿದ್ದರೂ ಇವರನ್ನು ನೋಡಿದ ಕೂಡಲೆ ಬಳಿಗೆ ಬಂದು ಕೈಂಕರ್ಯಕ್ಕೆ ನಿಲ್ಲುತ್ತಿದ್ದ. ಮಾಣಿ ಮಾಡಿಸಿದ ದೋಸೆ ದಿನದ ದೋಸೆಗಿಂತಲೂ ಚೆನ್ನಾಗಿರುತ್ತಿದ್ದಿತಲ್ಲದೆ, ತುಪ್ಪದ ಕ್ಷಾಮ ಅದರಲ್ಲಿ ಸಾಮಾನ್ಯವಾಗಿ ಮಾಯವಾಗಿರುತ್ತಿದ್ದಿತು. ಬಾಲಕನ ಭಕ್ತಿ ಮುಕುಂದರಾಯರನ್ನು ಮರುಳು ಮಾಡಿದ್ದಿತು. ಉಪಹಾರ ಮುಗಿದ ಮೇಲೆ 'ಬಹಳ ಒಳ್ಳೆಯ ಹುಡುಗ' ಎಂದು ಶಹಭಾಸ್‌ಗಿರಿಯನ್ನು ಅವರು ಮರೆಯದೆ ಕೊಟ್ಟು ಹೋಗುತ್ತಿದ್ದರು.

ಮಾಣಿ ಚಿತ್ರಗಳನ್ನು ನೋಡುತ್ತಾ ಮೈಮರೆತರೆ ಉಪಹಾರ ಮಂದಿರದ ಒಡೆಯ ಪರಮೇಶ್ವರಯ್ಯರ್ ಮಾಣಿಯನ್ನು ಮರೆಯುತ್ತಿರಲಿಲ್ಲ. ಕೆಲವು ನಿಮಿಷಗಳೊಳಗಾಗಿ ಮಂದಿರಕ್ಕೆ ಮಂದಿರವೇ ನಡುಗುವಂತೆ 'ಅಡಾ-ಮಾಣೀ....' ಎಂಬ ಗರ್ಜನೆ ಕೇಳಬಂತು. ಮಾಣಿ ಬೆದರಿ ಬೆದರಿ ತನ್ನ ಕೆಲಸದಲ್ಲಿ ಮತ್ತೆ ಉದ್ಯುಕ್ತನಾದ. ಗೆಳೆಯರು ಬೇರೆ ಪರಿಚಾರಕನಿಂದ ಕಾಫಿಯನ್ನು ತರಿಸಿಕೊಂಡು ತಮ್ಮ ಉಪಹಾರ ಮುಗಿಸಬೇಕಾಯಿತು. ಅಷ್ಟು ಹೊತ್ತಿಗೆ ಸೋಡಾ ಗ್ಲಾಸು ನೆಲದ ಮೇಲೆ ಬಿದ್ದ ಶಬ್ದ ಕೇಳಿ ಬಂತು. ಉಪಹಾರ ಮಂದಿರಗಳ ಈ ಗೊಂದಲ ಯಾವಾಗ ಅಣಗುವುದೋ ಎಂದು ಶಪಿಸಿಕೊಂಡು ಮೂರ್ತಿ ಚೀಲದಿಂದ ಹಣವನ್ನು ತೆಗೆಯುತ್ತಿರುವ ಹೊತ್ತಿಗೆ ಸರಿಯಾಗಿ 'ಅಯ್ಯೋ!' ಎಂದು ಚೀರಿದ ನಾದ ಕೇಳಿ ಬರಲು ಎಲ್ಲರೂ ಅತ್ತ ಓಡಿದರು.

ಪರಮೇಶ್ವರಯ್ಯರ ಮೇಜಿನ ಬಳಿ ಜ್ಞಾನ ತಪ್ಪಿ ಮಾಣಿ ಬಿದ್ದು ಬಿಟ್ಟಿದ್ದಾನೆ. ಮೂರ್ತಿ ಬಗ್ಗಿ ಅವನ ಬಳಿ ಕುಳಿತು ಮುಖದ ಮೇಲೆ ನೀರು ತಟ್ಟಿ ಮೆಲ್ಲನೆ ಎಬ್ಬಿಸಿದ. ಮಾಣಿ ಮೆಲ್ಲಮೆಲ್ಲನೆ ಕಣ್ಣು ತೆರೆದು 'ಗೊಳೋ' ಎಂದು ರೋಧಿಸಲಾರಂಭಿಸಿದ. ಈ ವೇಳೆಗೆ ಮುಕುಂದ ರಾಯರು ವಿಚಾರಣೆಗೆ ಆರಂಭಮಾಡಿದ್ದರು. ಮಾಣಿ ಸೋಡಾಗ್ಲಾಸನ್ನು ಎತ್ತಿಹಾಕಿ ಒಡೆಯಲು, ಪರಮೇಶ್ವರಯ್ಯರ್ ಕುಪಿತನಾಗಿ ಮಾಣಿಯನ್ನು ಅಪಾಯಸ್ಥಳದ ಮೇಲೆ ಒದೆದ ಹಾಗೂ—ಅದರಿಂದ ಅವನಿಗೆ ಪ್ರಜ್ಞೆ ತಪ್ಪಿದ ಹಾಗೂ ತಿಳಿಯಬಂತು. ತಿಂಡಿಗೆ ಬಂದಿದ್ದ ಗಿರಾಕಿಗಳೆಲ್ಲಾ ಅಯ್ಯರನ್ನು ಮನಸ್ವೀಬಯ್ದು ಒಬ್ಬೊಬ್ಬರಾಗಿ ಹೊರಟು ಹೋಗಲಾರಂಭಿಸಿದರು. ಅಯ್ಯರು ತನ್ನ ವ್ಯಾಪಾರ ಹಾಳಾದದ್ದು ಈ ಗೆಳೆಯರಿಂದ ಎಂದು ಅವರನ್ನು ತನ್ನ ಮೃದುವಾದ ತಮಿಳಿನಲ್ಲಿ ಮನಸ್ವೀ ಬಯ್ಯಲಾರಂಭಿಸಿದ. ಮುಕುಂದರಾಯರು ಅಯ್ಯರಿಗೆ ಸಮಾಧಾನ ಮಾಡುವ ನೆಪದಲ್ಲಿ ಬುದ್ಧಿ ಹೇಳಿ, ಕೆರಳಿ ನಿಂತಿದ್ದ ರಮೇಶ ಅವನನ್ನು ಪರಲೋಕ ಯಾತ್ರೆಗೆ ಕಳುಹಿಸದಂತೆ ಎಚ್ಚರತೆಗೆದುಕೊಂಡು ಮಾಣಿಯನ್ನು ಒಮ್ಮೆ ನೋಡಿ, ದುಃಖವನ್ನು ಮರೆಮಾಚಿಕೊಂಡು ಹೊರಕ್ಕೆ ಹೊರಟು ಹೋದರು. ಮೂರ್ತಿ ಅಯ್ಯರಿಗೆ ತಿಂಡಿಯ ಹಣವನ್ನು ತೆತ್ತು ತನ್ನ ವಿಳಾಸವನ್ನು

ಒಂದು ಚೀಟಿಯ ಮೇಲೆ ಬರೆದು ಮಾಣಿಯ ಕೈಯಲ್ಲಿತ್ತು ರಮೇಶನೊಂದಿಗೆ ಹೊರಗೆ ಬಂದ.

ಅಂದಿನ ಸಂಜೆ ಮೌನದ ಸಂಜೆಯಾಯಿತು. ಅನೇಕಾನೇಕ ವಿಷಯಗಳನ್ನು ಚರ್ಚಿಸಬೇಕೆಂದು ನಿಶ್ಚಯಿಸಿಕೊಂಡಿದ್ದ ಗೆಳೆಯರ ನಿರ್ಧಾರ ಬರಿದಾಗಿ ಹೋಯಿತು. ವಸಂತ ಶುಕ್ಲಪಕ್ಷದ ಸುಶಾಂತ, ಗಂಭೀರ, ಅಹ್ಲಾದಮಯ ವಾತಾವರಣ ಅವರ ಭಾಗಕ್ಕೆ ರೂಪಲಾವಣ್ಯರಹಿತಳಾದ ಮೂಳೆಯ ಮಾನವಿಯಂತಾಯಿತು. ಬರಿದಾಗಿದ್ದ ಅವರೆಲ್ಲರ ಅಂತರಂಗವನ್ನು ಒಂದೇ ಚಿಂತೆ ವಜ್ರಶೃಂಖಲೆಯಿಂದ ಕಟ್ಟಿ ಕಾಡಿಸುತ್ತಿತ್ತು. ಗೆಳೆಯರು ಸ್ವಲ್ಪ ಕಾಲ ತಮ್ಮ ಪ್ರಿಯವನದಲ್ಲಿ ಕುಳಿತರು. ಒಂದೆಡೆಯಲ್ಲಿ ಆಗುತ್ತಿದ್ದ ಮುನಿಸ್ವಾಮಿಯ ಮನೋಹರ ನಾಗಸ್ವರ ಅವರ ಕಿವಿಗೆ ಅಂದು ಬಹು ಕರ್ಕಶವಾಗಿ ಕಂಡುಬಂತು. ಗುರುತು ಕಂಡ ಮಿತ್ರರ ಮಾತುಕತೆಗಳು ಒಣ ಉಪಚಾರೋಕ್ತಿಗಳಾಗಿ ಭಾಸವಾದವು. ಈ ಮೌನರೂಪಕ ಯಾರಿಗೂ ರುಚಿಸದೆಂದು ಕೊನೆಗೆ ಗ್ರಹಿಸಿ ಗೆಳೆಯರು ಸೂಕ್ಷ್ಮವಾಗಿ ಪರಸ್ಪರ ಅಭಿವಂದಿಸಿಕೊಂಡು ಮನೆಯ ಕಡೆಯ ಹಾದಿ ಹಿಡಿದರು.

## ೨

ರಮೇಶನ 'ಕಲಾಶಾಲೆ' (Studio) ಅಷ್ಟು ಅಂದಚೆಂದವನ್ನು ಹೊರತೋರದಿದ್ದರೂ ಒಂದು ಬಗೆಯ ಒಪ್ಪ ಓರಣದಿಂದ ಚೆನ್ನಾಗಿಯೇ ಇತ್ತು. ಒಂದು ಗೋಡೆಯ ಮೇಲೆ ಅಂದವಾದ ನಾಲ್ಕಾರು ಸ್ವತಂತ್ರ ಚಿತ್ರಗಳು; ಮತ್ತೊಂದು ಗೋಡೆಯ ಮೇಲೆ ತನ್ನಿಂದಲೇ ರಚಿತವಾಗಿದ್ದ ಕೆಲವು ಭಾವಚಿತ್ರಗಳು; ಮಗುದೊಂದು ಗೋಡೆಯ ಮೇಲೆ ತ್ರಿವರ್ಣ ಚಿತ್ರವೆಂದು ಭ್ರಾಂತಿಯನ್ನುಂಟುಮಾಡುವಂತಹ ಕೆಲವು ಭಾವೋದ್ದೀಪಕ ಪೋಟೋಗಳು. ಯಂತ್ರಜನಿತವಾಗಿದ್ದ ಫೋಟೋಕಲೆಯನ್ನೂ ಸುಧಾರಿಸಿ ಅದಕ್ಕೆ ಲಲಿತಕಲೆಯ ಪಟ್ಟವನ್ನು ಕಟ್ಟಬೇಕೆಂಬುದು ರಮೇಶನ ಮಹದಾಶಯವಾಗಿದ್ದಿತು. ಅವನ 'ಸ್ವರೂಪಚಿತ್ರ' (Portraits) ಗಳಲ್ಲಿ ಒಂದು

ವಿಚಿತ್ರಶಕ್ತಿಯಿರುತ್ತಿತ್ತು. ತನ್ನ ಪುಟ್ಟ ಕಣ್ಣುಗಳಿಂದ ಮೂಲಪ್ರಕೃತಿಯ ಅಂತರಂಗವನ್ನು ಭೇದಿಸಿ ಚಿತ್ರಕಲೆಯಿಂದ ಅದರ ನೈಜಸ್ವರೂಪವನ್ನು ಎತ್ತಿ ತೋರಿಸುವ ಶಕ್ತಿಯನ್ನು ಅವನು ಪಡೆದಿದ್ದ. ಈ ಕಲಾನೈಪುಣ್ಯತೆ ಅವನ ಧನಸಂಪಾದನಾ ನೈಪುಣ್ಯವನ್ನು ಸ್ವಲ್ಪ ಕಡೆಗಾಣಿಸಿತ್ತು. ಚಪ್ಪಟೆ ಮೂಗು, ತೇಲುಗಣ್ಣು, ಹುಳುಕು ಮುಖವನ್ನು ಪಡೆದಿದ್ದರೂ ನವಮನ್ಮಥರಂತೆ ಚಿತ್ರದಲ್ಲಿ ಜನ ಕಾಣಿಸಿಕೊಳ್ಳಲಿಚ್ಛಿಸುವಾಗ ರಮೇಶ ನಿಜವಾಗಿಯೂ ಸುಂದರವಾಗಿರುವವರ 'ಕುರೂಪ' ಚಿತ್ರಗಳನ್ನು ತೆಗೆದುಕೊಟ್ಟರೆ ಅವರು ಅವುಗಳನ್ನು ಒಪ್ಪಿ – ಮೆಚ್ಚಿ – ಸ್ವೀಕರಿಸುವುದಾದರೂ ಹೇಗೆ? ರಮೇಶ ತನ್ನ ಕಲಾಶಾಲೆಯನ್ನು ಆರಂಭಿಸಿದ ಕೆಲವು ದಿವಸಗಳಲ್ಲಿಯೇ ಅದು ವ್ಯಾಪಾರ ಕೇಂದ್ರವಾಗುವುದು ಹೋಗಿ ಬಗೆಬಗೆಯ ಚಿತ್ರಗಳ 'ಪ್ರದರ್ಶನ ಶಾಲೆ' ಯಾಗುತ್ತ ಬಂದಿತು. ಯಾರಿಗೂ ಬೇಡದ ಚಿತ್ರಗಳೊಂದೆಡೆಯಲ್ಲಿ ....ಯಾರಿಗೂ ಅರ್ಥವಾಗದ ತನ್ನ ಕಲಾಚಿತ್ರಗಳು ಮತ್ತೊಂದೆಡೆಯಲ್ಲಿ.... ಇವುಗಳ ಮಧ್ಯೆ ಆರಾಮಾಸನದ ಮೇಲೆ ಕುಳಿತು 'ಕಲೆಯ ಗತ್ಯಂತರವೇನು' ಎಂದು ಆಲೋಚಿಸುವನು. ಕೈ ನಡೆಯುವ ನಾಲ್ಕು ದಿವಸ ತನ್ನ ಮನಸ್ಸಿಗೆ ಒಪ್ಪಿದ ರೀತಿ ವರ್ತಿಸಬಹುದು; ನಾಳೆ....ಇರುವ ಕುಡಿಕೆಹಣ ವ್ಯಯವಾಗಿ ಹೋದ ಮೇಲೆ....ಇದೇ ಸಾಧನೆಯನ್ನು ಮುಂದುವರಿಸಲಾಗುತ್ತದೆಯೇ? ಹಣಕ್ಕೆ ಹಲ್ಲು ಕಿರಿದು ಹಣಗಾರರ ಮನಸ್ಸನ್ನು ಮೆಚ್ಚಿಸುವ ಕೃತಿಗಳನ್ನು ಮಾಡಲು ಹೊರಡುವುದೇ? ಆ ಅವನತಿ ತನ್ನಲ್ಲಿ ಆರಂಭ ವಾಗುವುದೇ? ಎಂದು ಆಲೋಚಿಸುವನು. ಒಂದೆಡೆಯಲ್ಲಿ ಸರ್ವಸ್ವವನ್ನು ಪರಿತ್ಯಾಗಮಾಡಿ ನನ್ನಲ್ಲಿ ಬಾರೆಂದು ಕರೆಯುತ್ತಿರುವ 'ಕಲಾಸುಂದರಿ'— ಒಂದೆಡೆ ಸರ್ವಸ್ವವನ್ನೂ ನಿನಗೆ ಕೊಡುವೆ ಬಾರೆಂದು ಕರೆಯುತ್ತಿರುವ 'ಭಾಗ್ಯಸುಂದರಿ'—ಇವರಲ್ಲಿ ಯಾರನ್ನು ಆಶ್ರಯಿಸುವುದು ಎಂದು ಯೋಚಿಸುವನು.

ಇದರ ಜತೆಗೆ ಅಂದಿನ ಸಂಜೆ ಪರಮೇಶ್ವರಯ್ಯರ ಉಪಹಾರ ಮಂದಿರದಲ್ಲಿ ನಡೆದಿದ್ದ ದೃಶ್ಯ ಅವನ ಕರುಳಿರಿದು ಅಂತಃಕರಣವನ್ನು ಕಲಕಿ ಬಿಟ್ಟಿತ್ತು. ಅದನ್ನೇ ಯೋಚಿಸುತ್ತ ಯೋಚಿಸುತ್ತ ಎದ್ದು ಹುಚ್ಚನಂತೆ ಅಲೆದಾಡಹತ್ತಿದ. ಮನಸ್ಸಿನಲ್ಲಿ ಯೋಚನೆಯೊಂದಿಗೆ ಅಸ್ವಾಸ್ಥ್ಯ

ಹೆಚ್ಚುತ್ತ ಬಂದಿತು. ಪಕ್ಕದಲ್ಲಿದ್ದ ತನ್ನ ಚಿತ್ರರಚನಾ ಪುಸ್ತಕವನ್ನು ತೆಗೆದುಕೊಂಡು ಒಂದು ಹಾಳೆಯ ಮೇಲೆ ಇದ್ದಲಿನ ತುಂಡಿನಿಂದ ಮನಸ್ಸು ಬಂದಹಾಗೆ ಗೀಚತೊಡಗಿದ. ಸ್ವಲ್ಪ ಹೊತ್ತಾಯಿತು. ತನ್ನ ಕೃತಿಯನ್ನು ತಾನೇ ನೋಡಿ ಸಮಾಧಾನಪಟ್ಟುಕೊಂಡ. 'ಚಿಂದಿ ಚಿಂದಿಯನ್ನು ಧರಿಸಿರುವ ಒಬ್ಬ ಬಾಲಕ ರೋಧಿಸುತ್ತ ನಡಗುತ್ತ ನಿಂತಿದ್ದಾನೆ. ಅವನ ಮುಂದೆ ಒಂದು ಮೊಂಡು ದೊಣ್ಣೆ ಹಿಡಿದು ಯಮದೂತನಂತಹ ಒಬ್ಬ ಆಳು ನಿಂತಿದ್ದಾನೆ. ಆ ಯಮದೂತನ ಹಿಂದೆ ಅಸ್ಥಿಪಂಜರದಂತಿರುವ ಕರಾಳಮೂರ್ತಿಯೊಂದು ವಕ್ರವಾಗಿ ಮುಖಮಾಡಿಕೊಂಡು ಬಾಲಕನ ಕಡೆ ಬೆರಳುತೋರಿಸುತ್ತಿದೆ. ಬಾಲಕನ ಕಣ್ಣುಗಳಿಂದ ದುಃಖದ ಹನಿಗಳು ಜಾರುತ್ತಿವೆ. 'ಈ ಅನ್ಯಾಯದ ಕೊನೆ ಎಂದಿಗೆ?' ಎಂಬ ಪ್ರಶ್ನೆ ರಮೇಶನನ್ನು ಕಾಡಿಸಲಾರಂಭಿಸಿತು. ಚಿತ್ರವನ್ನು ಹಾಗೆಯೇ ದಿಟ್ಟಿಸಿ ನೋಡುತ್ತ ಕುಳಿತ. ಸ್ವಲ್ಪ ಕಾಲಾನಂತರ ಬಾಗಿಲು ತಟ್ಟಿದ ಶಬ್ದ ಕೇಳಿ ಬಂತು. ಗಾಳಿಯ ಗಲಭೆಯೆಂದು ರಮೇಶ ತನ್ನ ತಪೋಭಂಗವನ್ನು ಬಯಸದೆ ಸುಮ್ಮನಿದ್ದ. ಮತ್ತೆ ಬಾಗಿಲು ತಟ್ಟಿದ ಶಬ್ದ....ಜತೆಗೆ ಮೂರ್ತಿಯ ಧ್ವನಿ. ಮನಸ್ಸು ಉಲ್ಲಸಗೊಂಡಿತು. ಝಗ್ಗನೆದ್ದು ಬಾಗಿಲು ತೆಗೆದು ಮೂರ್ತಿಯೊಂದಿಗೆ ಬಂದು ಮತ್ತೆ ತನ್ನ ಸ್ಥಳದಲ್ಲಿ ಕುಳಿತ. ಎದುರಿಗಿದ್ದ ಬೆತ್ತದ ಕುರ್ಚಿಯನ್ನಲಂಕರಿಸಿ ಮೂರ್ತಿ ಸಿಗರೇಟನ್ನೆಳೆದು ರಮೇಶನಿಗೊಂದನ್ನಿತ್ತು ತಾನೊಂದು ಹಚ್ಚಿ ಹೊಗೆಯಲ್ಲಿ ಚಕ್ರಗಳನ್ನು ಸೃಷ್ಟಿಸುತ್ತಾ, ಅದು ಮೆಲ್ಲಮೆಲ್ಲನೆ ಚಾವಣಿಗೆ ಏರಿ ಅಲ್ಲಿ ಒಡೆದು ದಿಕ್ಕು ಪಾಲಾಗಿ ಹೋಗುವುದನ್ನು ನೋಡುತ್ತ ಕುಳಿತ.

ಸಿಗರೇಟು ಮುಗಿಯುತ್ತ ಬರುವ ಹೊತ್ತಿಗೆ ಮೂರ್ತಿಯ ಮನಸ್ಸು ಕೆಳಗೆ ಬಿದ್ದಿದ್ದ ರಮೇಶನ ಚಿತ್ರವಹಿಯ ಕಡೆಗೆ ಜಾರಿತು. ಆಲಸ್ಯದಿಂದ ಅದನ್ನು ತೆಗೆದುಕೊಂಡು ನೋಡುತ್ತ ನೋಡುತ್ತ, ರಮೇಶ ಆಗತಾನೆ ಮುಗಿಸಿದ್ದ ಚಿತ್ರವನ್ನು ನೋಡುತ್ತಾ ಕುಳಿತುಬಿಟ್ಟ. ತನ್ನ ಗುಟ್ಟು ರಟ್ಟಾಯಿತಲ್ಲಾ ಎಂದು ರಮೇಶನಿಗೆ ವ್ಯಥೆ; ಆದರೆ ಅದನ್ನು ರಟ್ಟುಮಾಡಿದವನು ಮೂರ್ತಿ ತಾನೆ ಎಂದು ಸಮಾಧಾನ. ಚಿತ್ರ ಹೇಗಿದೆಯೆಂದು ಕೇಳಬೇಕೆಂದು ರಮೇಶನಿಗೆ ಆತುರ; ಆದರೆ ಮೂರ್ತಿ ಅದನ್ನು ನೋಡು

ತ್ತಿದ್ದ ರೀತಿಯಲ್ಲಿ ಕೇಳದಿರುವುದೇ ಶ್ರೇಯಸ್ಕರವೆಂದು ಸುಮ್ಮನಾದ. ಸ್ವಲ್ಪ ಹೊತ್ತು ಹೀಗೆ ಕಳೆದ ಮೇಲೆ ಮೂರ್ತಿ ಮೆಲ್ಲನೆ ಕೇಳಿದ

"ಇದನ್ನು ಯಾವಾಗ ಬರೆದೆ ರಮೇಶ ?"

"ಈಗತಾನೆ. ನೀನು ಬರುವುದಕ್ಕೆ ಐದು ನಿಮಿಷಕ್ಕೆ ಮುಂಚೆ ಮುಗಿಸಿದೆ."

"ಸರಿ. ಹಾಗಾದರೆ."

"ಏಕೆ ? ಒಪ್ಪಲಿಲ್ಲವೇನು ?"

"ಒಪ್ಪಲಿಲ್ಲವೆಂದಲ್ಲ........ಆದರೆ ಇದಕೆ ಪೂರಕವೊಂದು ಬೇಕೆಂದು ನನಗನಿಸುತ್ತದೆ."

"ಹಾಗಂದರೆ ?"

"ಹಾಗಂದರೆ.... ಇದನ್ನು 'ಇಂದಿನ ಭಾರತ' ಎಂದು ಕರೆ. ಮುಂದಕ್ಕೆ ವಾಣಿಯ ಕೈಗೆ ಒಂದು ದೊಣ್ಣೆ ಕೊಟ್ಟು ಇದರ ಸೇಡನ್ನು ಅವನು ತೀರಿಸಿ ಕೊಳ್ಳುತ್ತಿರುವಂತೆ ಒಂದು ಚಿತ್ರ ಬರೆದು ಅದಕ್ಕೆ 'ನಾಳಿನ ಭಾರತ' ಎಂದು ಹೆಸರುಕೊಡು. ಆಗ ಎಲ್ಲವೂ ಸರಿಹೋಗುತ್ತದೆ."

"ಆ ಯೋಚನೆ ನನಗೆ ಬಂತು. ಆದರೆ ಸೇಡಿನಿಂದ ಉಪಯೋಗ ವಿಲ್ಲವೆಂದು ಸುಮ್ಮನಾದೆ."

"ದುಷ್ಟತನಕ್ಕೆ ಸೇಡೇ ಮದ್ದು. ಧನದ ದರ್ಪಕ್ಕೆ ದೊಣ್ಣೆಯ ಪೆಟ್ಟೇ ತಕ್ಕ ಮದ್ದು."

"ಆದರೆ ಎಲ್ಲೋ ಒಂದೆರಡು ಕಡೆ ನಡೆಯುವ ವ್ಯವಹಾರಕ್ಕೆ ನಾವು ಅಂತಹ ಸ್ವರೂಪ ಕೊಡುವುದು ಯಾವ ನ್ಯಾಯ ?"

"ನೀನು ಹಾಗಾದರೆ ಧನವಂತರ ವಕೀಲಿ ವಹಿಸುತ್ತೀಯೇನು ?"

"ಈ ಚಿತ್ರ ನೋಡು. ನಿನ್ನ ಪ್ರಶ್ನೆಗೆ ಉತ್ತರವಿಲ್ಲಿದೆ" ಎಂದು ರಮೇಶ ಕಳಿಕಳಿಯಿಂದ ಉತ್ತರವಿತ್ತ. ಮೂರ್ತಿಯ ಮನಸ್ಸು ಕೊಂಚ ಅಳುಕಿತು. ತಾನು ಆಡಿದುದು ದುಡುಕು ಮಾತೆಂದು ಭಾಸವಾಯಿತು.

"ಕ್ಷಮಿಸು ರಮೇಶ, ನಿನ್ನನ್ನು ದೂಷಿಸಬೇಕು ಎಂದು ನಾನು ಹಾಗೆ ಅನ್ನಲಿಲ್ಲ. ಬಾಯಿತಪ್ಪಿ ಮಾತು ಹಾಗೆ ಹೊರಟಿತು."

"ಇರಲಿ ಬಿಡು ಮೂರ್ತಿ, ಯಾವ ದೊಡ್ಡ ವಿಷಯ. ಅನವಶ್ಯಕವಾದ ವಿಷಬೀಜವನ್ನು ನಾವು ಬಿತ್ತಬಾರದೆಂಬುದೇ ನನ್ನ ಮತ."

"ಒಪ್ಪಿದೆ. ಆದರೆ ವಿಷಬೀಜವನ್ನು ಬಿತ್ತುತ್ತಿರುವವರು ಯಾರು? ಧನದಿಂದ ಜನದ ಮೇಲೆ ಅಧಿಕಾರವಿದೆಯೆಂಬ ಅಮಲಿನಿಂದ ಮನಸ್ಸಿಗೆ ಬಂದಂತೆ ವರ್ತಿಸುತ್ತಿರುವವರು ಯಾರು? ಬಡವರ ಬಗ್ಗರ ರಕ್ತಹೀರಿ ಅವರು ಒಣ ಚರ್ಮ ಮೂಳೆಗಳನ್ನು ಧರಿಸಿಯೂ ಬದುಕಿರಬಾರದೆಂದು ಹವಣಿಸುತ್ತಿರುವರು ಯಾರು?—ಅವರೇ ವಿಷಬೀಜ ಬಿತ್ತುತ್ತಿರುವವರು."

"ಸರಿ ಸರಿ. ಆದರೆ ದುಷ್ಟತನಕ್ಕೆ ದುಷ್ಟತನ, ಪೆಟ್ಟಿಗೆ ಪೆಟ್ಟು ಎಂದಿಗೂ ಮದ್ದಾಗಲಾರದು."

"ಆಗಲೇಬೇಕು. ಹುಣ್ಣಿಗೆ ಶಸ್ತ್ರಚಿಕಿತ್ಸೆಯೇ ಬೇಕು. ಶಸ್ತ್ರ ಎಷ್ಟು ಮೊನೆಯಾಗಿದ್ದರೆ ಚಿಕಿತ್ಸೆಯ ಗುಣ ಅಷ್ಟು ಗಟ್ಟಿ."

"ನೀನು ಹೇಳುತ್ತಿರುವುದು ಹುಣ್ಣನ್ನು ವಾಸಿಮಾಡಲಾಗದಿದ್ದರೆ ದೇಹದ ಆ ವ್ಯಾಧಿಗ್ರಸ್ತ ಅಂಗವನ್ನೇ ಕಡಿದುಹಾಕೆನ್ನುವ ಸಿದ್ಧಾಂತದ ವ್ಯಾಖ್ಯೆ."

"ಹೌದು. ಹಾಗೆಯೇ ಮಾಡಬೇಕು. ಒಂದು ಅಂಗದ ಮೋಹಕ್ಕೆ ಎಲ್ಲ ಅಂಗಗಳನ್ನೂ ಬಲಿ ಕೊಡಬೇಕೇನು? ಒಂದು ಕಾಲು ಹೋದರೆ ಊರೆ ಗೋಲಿನಿಂದ ನಡೆದುಕೊಂಡು ಮನುಷ್ಯ ಧಾರಾಳವಾಗಿ ಬದುಕಬಹುದು. ಆ ಕಾಲನ್ನು ಬದುಕಿಸಹೋಗಿ ತನ್ನ ಇಡೀ ದೇಹ ಕೊಳೆತು ನಶಿಸಲು ಬಿಡುವುದು ಯಾವ ನ್ಯಾಯ?"

"ಹಾಗಾದರೆ ಧನವಂತರನ್ನು ಕೊಳೆತ ಕಾಲಿನ ಲೆಕ್ಕಕ್ಕೆ ಸೇರಿಸುವೆ ಯೇನು.?"

"ಬೆಳಗ್ಗಿನ ದೃಶ್ಯ ನೋಡಿದ ಮೇಲೆ ನಿನಗೂ ಹಾಗೆ ಅನ್ನಿಸುವು ದಿಲ್ಲವೆ?"

"ಅನ್ನಿಸುತ್ತದೆ. ಮುಂದೆ ಆ ಹುಡುಗನ ಗತಿಯೇನು?"

"ಅದನ್ನು ಹೇಳುವುದಕ್ಕೆ ಇಲ್ಲಿಗೆ ಓಡಿ ಬಂದೆ. ನೀನೂ ಅದೇ ಯೋಚನೆಯಲ್ಲಿರುವುದು ತುಂಬ ಸಂತೋಷ. ಈಗ ಅವನೇ ನಮ್ಮ ಮನೆಗೆ ಬಂದಿದ್ದ."

"ಆ! ಬಂದಿದ್ದನೇ!"

"ಘೋರ ಕಥೆ ರಮೇಶ, ಅದನ್ನು ಕೇಳಿದರೆ ಕಲ್ಲುಗಳು ಕೂಡ ಕರಗುತ್ತವೆ, ಇನ್ನು ನಮ್ಮ ಪಾಡೇನು!"

"ಏನದು! ಹೇಳು ಮಹಾರಾಯಾ."

"ಹುಡುಗ ಆರು ತಿಂಗಳ ಮಗುವಾಗಿರುವಾಗಲೆ ಅವನ ತಂದೆ ತೀರಿಕೊಂಡನಂತೆ. ತಾಯಿ ಯಾವುದೋ ಹೋಟಲಿನಲ್ಲಿ ದೋಸೆರುಬ್ಬಿಕೊಂಡು ಮಗನ ಮತ್ತು ತನ್ನ ಜೀವನಯಾತ್ರೆ ಸಾಗಿಸುತ್ತಾ ಇದ್ದಳು. ಅವಳೂ ಮೊನ್ನೆ ಪ್ಲೇಗು ಪಿಡುಗಿನಲ್ಲಿ ತೀರಿಕೊಂಡಳಂತೆ. ತಾಯಿಯ ವೃತ್ತಿಯನ್ನೇ ಮಗ ಅವಲಂಬಿಸಿದ...."

"ಇವರಲ್ಲಿ ಘೋರ ಏನು ಬಂತು."

"ನಿನಗೆ ರಮೇಶ, ಕಲಾಖ್ಯಾತಿ ಬೆಳೆಯುತ್ತಾ ಬೆಳೆಯುತ್ತಾ ಅಂತಃಕರಣ ಕೊಂಚಕೊಂಚವಾಗಿ ದುರ್ಬಲವಾಗುತ್ತಿರುವ ಹಾಗಿದೆ. ಆ ಹುಡುಗನ ವಿಚಾರವಿನ್ನೂ ನೀನು ಪೂರ್ತಿ ಕಾಣೆ. ಅದಕ್ಕೋಸ್ಕರವೇ ಹಾಗೆನ್ನುತ್ತಿರುವೆ."

"ನೋಡು ಮೂರ್ತಿ, ದಾರಿದ್ರ್ಯದ ಬಗೆಬಗೆಯ ರೂಪ ನೋಡಿ ನೋಡಿ ನನಗೆ....ನೀನು ಹೇಳಿದಹಾಗೆ....ಅಂತಃಕರಣ ಕೊಂಚ ಮೆತ್ತಗಾಗುತ್ತಲೇ ಇದೆ. ಎಲ್ಲರ ದುಃಖ ನೀಗಿಸುವ ಶಕ್ತಿ ನಮಗಿಲ್ಲ. ಇನ್ನು ಒಣ ಇಚ್ಛೆ ಇಟ್ಟುಕೊಂಡು ಏನು ಪ್ರಯೋಜನ?"

"ಒಪ್ಪಿದೆ ಆದರೆ ಈ ವ್ಯಕ್ತಿಯ ದುಃಖ ನೀಗಿಸಬಹುದು. ನೀನು ನೀಗಿಸಬಹುದು. 'ಆಗಲಿ' ಎಂದೆನ್ನು—ಮುಂದಿನ ಮಾತು ಅನಂತರ."

"ಏನು ಸರಿಯಾಗಿ ಹೇಳಪ್ಪಾ. ಸುಮ್ಮನೆ ಮಾತಿಗೆ ಸಿಕ್ಕಿಸಿ ಗೋಳುಹುಯಿದುಕೊಳ್ಳಬೇಡ."

"ನಾವು ಹೋಟಲಿಗೆ ಹೋದಾಗಲೆಲ್ಲಾ ಮಾಣಿ ನಮ್ಮ ಹತ್ತಿರವಿರುತ್ತಿದ್ದ ಕಲಾಪತ್ರಿಕೆಗಳನ್ನು ನೋಡುತ್ತಿದ್ದುದು ನಿನಗೆ ಜ್ಞಾಪಕವಿರಬಹುದು."

"ಇದೆ."

"ಅವನ ಜಾತಿಯ ಯಾವ ಹುಡುಗರಿಗೂ ಇಲ್ಲದ ಕಲಾಸಕ್ತಿ ಆವನಿಗೇ ತಕ್ಕಿದೆ ಎಂದು ವಿಚಾರಮಾಡಿದೆಯಾ?"

"ಇಲ್ಲ....ನೀನು ವಿಚಾರ ಮಾಡಿದೆಯಾ ?"

"ನಾನೂ ಮಾಡಲಿಲ್ಲಾ ಸರಿ. ಮುಂದಿನ ಕಥೆಕೇಳು. ಯಾರಿಗೂ ತಿಳಿಯದ ಹಾಗೆ ಮಾಣೀನೂ ಕೆಲವು ಚಿತ್ರಗಳನ್ನು ಬರೆದಿದ್ದಾನೆ. ಅವುಗಳನ್ನೂ ಹೇಗಾದರೂ ನಮ್ಮ ಕಣ್ಣಿಗೆ ಹಾಕಬೇಕೆಂದು ಅವನು ಹವಣಿಸುತ್ತಿದ್ದ. ಇಂದು ಅನಾಯಾಸವಾಗಿ ಅವನ ಆಸೆ ಕೈಗೂಡಿತು."

"ಹಾಗೇನು ? ಎಲ್ಲಿ ಎಲ್ಲಿ ಚಿತ್ರಗಳು ?"

ಮೂರ್ತಿ ಅವನ ಕೈಗೆ ಮಾಸಿಹೋಗಿದ್ದ ಒಂದು ಕಾಗದದ ಸುರುಳಿಯನ್ನಿತ್ತ. ಸುರುಳಿಯನ್ನು ಬಿಚ್ಚಲು ಬೇರೆ ಬೇರೆ ಅಳತೆಯ ಅಂತಹವೇ ಮಾಸಿದ ಎಂಟು ಹತ್ತು ಕಾಗದದ ಸುರುಳಿಗಳುರುಳಿದವು. ರಮೇಶ ಅವುಗಳನ್ನು ಪರೀಕ್ಷಿಸುತ್ತಾ ಒಂದನ್ನು ಗುರುತಿಸಿ,

"ಇದು ಯಾವುದು ಗೊತ್ತೇ ಮೂರ್ತಿ."

"ಗೊತ್ತಿಲ್ಲವೇ. ನಿನ್ನ ಗೆರುಸೊಪ್ಪೆ ಜಲಪಾತದ ಪ್ರತಿ."

"ಇದು ರ್‍ಯಾಫೇಲನ ವ್ಯಾಡೊನ (Raphael's 'Madonna') ಇದ್ದ ಹಾಗಿಲ್ಲವೇ ?"

"ಹೌದು ಕ್ರಿಸ್ತಮಾತೆಗೆ ಸೀರೆ ಉಡಿಸಿ 'ಯಶೋದಾಕೃಷ್ಣ' ಎಂದು ಹೆಸರಿಟ್ಟಿದ್ದಾನೆ."

"ಇವೆರಡು ಅವನ ಸ್ವಂತ ಚಿತ್ರಗಳೆಂದು ಕಾಣುತ್ತವೆ. ಈ 'ಅಡಿಗೆಯವ'ನ ಮುಖದಲ್ಲಿರುವ ಭಾವ ನೋಡು ಎಷ್ಟು ಚೆನ್ನಾಗಿದೆ!"

"ಇದೂ ಪರವಾಯಿಲ್ಲ, ಅಲ್ಲವೇ ರಮೇಶ. ಕಬ್ಬನ್‌ಪಾರ್ಕಿನ ನೋಟವೆಂದು ಕಾಣುತ್ತದೆ. ಅಂತೂ ಹುಡುಗ ಬುದ್ಧಿವಂತ."

"ಇವನಿಗೆ ಈ ರೇಖಾರಚನ ಸಾಮರ್ಥ್ಯ ಎಲ್ಲಿಂದ ಬಂತು ? ಯಾರಲ್ಲಿಯಾದರೂ ಕಲಿತನೇನು ?"

"ಅದೇ ಆಶ್ಚರ್ಯ ನೋಡು. ಮೊದಲಿನಿಂದಲೂ ಕಂಡ ಕಂಡ ಚಿತ್ರಗಳನ್ನು ಅನುಕರಿಸಿ ಇದ್ದಿಲಿನಿಂದ ಬರೆಯುವುದಕ್ಕಾರಂಭಿಸಿದನಂತೆ. ಕೆಲವು ದಿವಸಗಳ ಹಿಂದೆ ಬಣ್ಣಗಳಲ್ಲಿ ಚಿತ್ರಗಳನ್ನು ಬರೆಯಬೇಕೆನ್ನಿಸಿತಂತೆ. ಅದಕ್ಕೆ ಬಣ್ಣ ಬಣ್ಣದ ಹೂವುಗಳನ್ನೂ ಎಲೆಗಳನ್ನೂ ಸಂಗ್ರಹಿಸಿ ತನ್ನ ಬಣ್ಣವನ್ನು ತಾನೇ ಮಾಡಿಕೊಂಡು ಆರಂಭಿಸಿದನಂತೆ."

"ಭಲೆ ಭಲೆ! ಕುಂಚಕ್ಕೇನು ಮಾಡಿದನಂತೆ?"

"ಮೊದಲು ಕುದುರೆಯ ಝುವಿಯನ್ನು ಉಪಯೋಗಿಸಿದನಂತೆ. ಅದು ಪೊರಕೆ ಇದ್ದ ಹಾಗಿದ್ದಿತೆಂದು ಅಳಿಲಿನ ಬಾಲದ ಕೂದಲನ್ನು ಉಪಯೋಗಿಸುತ್ತಾ ಬಂದಿರುವನಂತೆ."

"ಹಾಗಾದರೆ ರಾಮಚಂದ್ರ ಮುದ್ದಾಡಿದ ಎಷ್ಟೋ ಅಳಿಲುಗಳನ್ನು ಧ್ವಂಸ ಮಾಡಿಬಿಟ್ಟಿದ್ದಾನೆ."

"ಸಂದೇಹವಿಲ್ಲದೆ. ಅವನ ಕೆಲಸ ನಿನಗೇನನ್ನಿಸುತ್ತದೆ?"

"ಬಹಳ ಉತ್ತೇಜಕ; ರೇಖಾನೈಪುಣ್ಯ ಅಸಾಧಾರಣ. ಇವತ್ತು ಮೊದಲನೆಯ ವರ್ಗದವರೆನಿಸಿಕೊಂಡಿರುವ ಚಿತ್ರಗಾರರಲ್ಲಿ ಕೂಡ ಈ ಬಾಲಕನ ಸಾಮರ್ಥ್ಯದಲ್ಲಿ ಶೇಕಡ ಒಂದು ಭಾಗವಿಲ್ಲ. ಆದರೆ ಈ ಅನುಕರಣಪ್ರಿಯತೆ ಹೋಗಬೇಕು. ಇವನು ಈಗ ಕಲಿತಿರುವುದನ್ನು ಮೊದಲು ಮರೆತರೆ ಮುಂದೆ ವಿದ್ಯೆ ತಲೆಗೆ ಹತ್ತುತ್ತದೆ. ಬಣ್ಣದ ಕಡೆಗೆ ಕಣ್ಣಿದೆ ಆದರೆ ಅಭಿರುಚಿಯಿಲ್ಲ. ಅದು ಕ್ರಮೇಣ ಅನುಭವದಿಂದ, ಅಭ್ಯಾಸದಿಂದ ಬೆಳೆಯಬೇಕು"

"ಮುಂದಕ್ಕೆ ನೀನು ಇದ್ದೀಯಲ್ಲಾ. ಇನ್ನು ಏನು ಯೋಚನೆ."

"ಹಾಗೆಂದರೆ?"

"ಮಾಣಿಯನ್ನು ನೀನೂ, ನಾನೂ, ಮಾವಯ್ಯ ಮೂವರೂ ಸಾಕಿಕೊಳ್ಳುವುದೆಂದು ನಾನು ನಿರ್ಧರಿಸಿದ್ದೇನೆ."

"ಎಲ್ಲಾ ವ್ಯವಸ್ಥೆ ಮಾಡಿಕೊಂಡೇ ಬಂದಿದ್ದೀ."

"ನೋಡು. ಮಾಣಿ ನಿನ್ನ ಸ್ಟೂಡಿಯೋಲಿದ್ದು ನಿನ್ನಿಂದ ವಿದ್ಯೆ ಕಲಿಯಬೇಕು. ನಮ್ಮ ಮನೆಯಲ್ಲಿ ಎರಡು ವಾರ ಮಾವಯ್ಯನ ಮನೆಯಲ್ಲಿ ಎರಡು ವಾರ. ಅವನ ಸಾಮಾನು ಮತ್ತು ಇತರ ವೆಚ್ಚಗಳಿಗೆ ನಾವು ಮೂವರೂ ಸೇರಿ ಕೊಡುವುದು. ಇದು ಒಪ್ಪಿಗೆ ತಾನೇ?"

"ಹಾಗಾದರೆ ನಾನು ಅವನ ಗುರುವಾಗಬೇಕು."

"ಹೌದು, ಅದಕ್ಕೇನು ಹಿಂದು ಮುಂದು ನೋಡುತಿದ್ದೀಯಲ್ಲಾ."

"ಹಿಂದು ಮುಂದೇನೂ ಇಲ್ಲ. ನನ್ನಲ್ಲಿ ಆರು ತಿಂಗಳು ಕುಂಚ ಹಿಡಿಯುವುದನ್ನು ಕಲಿತು ಏಳನೆಯ ತಿಂಗಳಲ್ಲಿ ಕೆಲಸಕ್ಕೆ ಬಾರದ ದೋಸೇ

ಅಂಗಡಿ ಬೋರ್ಡುಗಳನ್ನು ಬರೆಯುವ ಕಲಾಭವನವನ್ನು ಅವನು ತೆಗೆದು ಬಿಟ್ಟರೆ, ನನಗೆ ಒಳ್ಳೆಯ ಗೌರವ ಬರುತ್ತದೆ."

"ನೀನಾಗಿ ನೀನು ಹೋಗು ಎಂದು ಹೇಳುವವರೆಗೆ ಅವನು ಬೇರೆ ಹೋಗದ ಹಾಗೆ ನಾನು ವ್ಯವಸ್ಥೆ ಮಾಡುತ್ತೇನಯ್ಯಾ."

"ಏನು ಬೇಕೋ ಮಾಡಪ್ಪಾ, ನೀನು ಗಂಟುಬಿದ್ದ ಮೇಲೇನು, ಬ್ರಹ್ಮಗಂಟು ತಾನೆ" ಎಂದು ನಗುನಗುತ್ತಾ ನುಡಿದು ಮೂರ್ತಿಯ ಬೆನ್ನು ಚಪ್ಪರಿಸಿದ. ಇಬ್ಬರ ಮನಸ್ಸೂ ಹಗುರಗೊಂಡು ಹರ್ಷದಿಂದ ಹಾರಾಡುತ್ತಿತ್ತು. ತಾವು ಮಾಡಿದ ನಿರ್ಧಾರಕ್ಕೆ ತಮ್ಮನ್ನು ತಾವೇ ಮೆಚ್ಚಿಕೊಂಡರು. ಗಂಟೆ ಹತ್ತು ಹೊಡೆದಿದ್ದರೂ ಲೆಕ್ಕಿಸದೆ ಎಲ್ಲಿ ಉತ್ತಮ ಕಾಫಿ ಸಿಕ್ಕುವುದೆಂದು ಊರಿನ ಹೋಟಲುಗಳನ್ನೆಲ್ಲಾ ಹುಡುಕಿಕೊಂಡು ಹೊರಟರು.

೩

ಆರು ತಿಂಗಳು ಕ್ಷಣಗಳಂತೆ ಕಳೆದು ಹೋದವು. ಮಾಣಿ ತನ್ನನ್ನು ತಾನೇ ಗುರುತಿಸಿಕೊಳ್ಳಲಾರದಾದ. ಶುಭ್ರವಾದ ದೇಹ, ಶುಚಿಯಾದ ಬಟ್ಟೆಬರೆ, ಹೊಟ್ಟೆತುಂಬ ಅನ್ನ, ಆದರಿಸುವ ಮೂರು ಭಾಗ್ಯದೇವತೆಗಳು ತನಗೆ ದೊರೆತುದು ಅಪೂರ್ವ ಪುಣ್ಯಫಲದಿಂದ ಎಂದಂದುಕೊಂಡ. ಬೀದಿಯ ಕಸವಾಗಿ ಬಿದ್ದಿದ್ದ ತನ್ನನ್ನು ಮೇಲಕ್ಕೆತ್ತಿ ಮಾನವ ವರ್ಗದಲ್ಲಿ ಕೂಡಿಸಲೆತ್ನಿಸುತಿದ್ದ ತನ್ನ ಪೋಷಕರ ಕೃಪೆಗೆ ತಕ್ಕ ಹಾಗೆ, ಅವರ ಪ್ರೇಮಕ್ಕೆ ಅಪವಾದವಾಗದ ಹಾಗೆ, ಜೀವನವನ್ನು ಬೆಳಸಿ ದೊಡ್ಡದು ಮಾಡಿಕೊಳ್ಳಬೇಕೆಂದು ನಿರ್ಧರಿಸಿಕೊಂಡ. 'ಈ ಗೆಳೆಯರು ತನಗೆ ದೊರೆಯದೆ ಮೊದಲಿನ ಹಾಗೇ ನನ್ನ ಜೀವನ ಸಾಗಿದ್ದರೆ ಮುಂದೆ ಏನಾಗುತ್ತಿದ್ದೆ ? ಹೋಟಲಿನ ಸೇವಕನಾಗಿಯೇ ಸಾಯುತ್ತಿದ್ದೆ. ಇಲ್ಲವೇ ನಾಲ್ಕಾರು ವರ್ಷಗಳ ನಂತರ ನಾನೇ ಒಂದು ಹೋಟಲು ತೆರೆದು ಪರಮೇಶ್ವರಯ್ಯರ್ ಸ್ಥಾನವನ್ನು ಪಡೆದು, ಹತ್ತಾರು ಇತರ ಮಾಣಿಗಳ ರಕ್ತವನ್ನು ಹೀರುತ್ತಿದ್ದೆ....ಆದರೆ ಈಗ ನನ್ನ ಭಾಗ್ಯದ ಬಾಗಿಲು ತೆರೆದಿದೆ. ಮುಂದೆ ಉತ್ತಮ ಚಿತ್ರಕಾರನಾಗಬಹುದು. ಶಿಲ್ಪಿಯಾಗಬಹುದು. ಅನೇಕ ದೊಡ್ಡವರ ಸಹಾಯದಿಂದ

ಲೋಕದಲ್ಲಿ ಗಣ್ಯನಾಗಬಹುದು' ಎಂಬ ಎರಡು ಚಿತ್ರಗಳು ಮಾಣಿಯ ಅಂತರಂಗದ ಮುಂದೆ ಬಂದು ನಿಲ್ಲುತ್ತಿದ್ದವು. 'ತಾನು ಮುಂದೆ ದೊಡ್ಡವನೇ ಆಗಲಿ ಚಿಕ್ಕವನಾಗಿಯೇ ಉಳಿಯಲಿ, ತನ್ನ ರಕ್ಷಕರಿಗೆ ಯಾವ ಬಗೆಯಲ್ಲಿಯೂ ನೋವಾಗದಂತೆ ನಡೆದುಕೊಳ್ಳಬೇಕು–ಅವರ ಆಶಾವೃಕ್ಷ ಒಣಗಿ ಭೂಮಿಗೆ ಬೀಳದಂತೆ ನೋಡಿಕೊಳ್ಳಬೇಕು' ಎಂದು ಶಪಥ ಮಾಡಿದ.

ಮಾಣಿಯ ಪ್ರಗತಿ ರಮೇಶನಿಗೆ ತುಂಬ ಆಶೆಯನ್ನಿತ್ತಿತು. ಶಿಷ್ಯನಿಗೆ ಯೋಗ್ಯನಾದ ಗುರು ದೊರೆಯುವುದೆಷ್ಟು ದುರ್ಲಭವೋ, ಗುರುವಿಗೆ ಯೋಗ್ಯನಾದ ಶಿಷ್ಯ ದೊರೆಯುವುದು ಅಷ್ಟೇ ದುರ್ಲಭವೆಂದು ಅನುಭವದಿಂದ ರಮೇಶ ಮನಗಂಡಿದ್ದ. ಕಲಿಯುವ ಶ್ರದ್ಧೆ, ಕಲಿತುದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸುವ ಶಕ್ತಿ ಎರಡೂ ಇರುವ ಮಾಣಿಗಲ್ಲದೆ ಬೇರೆ ಯಾರಿಗೆ ತಾನು ಹೇಳಿಕೊಡಬೇಕು ಎಂದು ರಮೇಶ ತ್ರಿಕರಣಪೂರ್ವಕವಾಗಿ ಬೋಧಿಸಲಾರಂಭಿಸಿದ.

ಮಾಣಿಗೆ ಕಲೆಯನ್ನು ಕಲಿಸುವುದು ಎಷ್ಟು ಸುಲಭವೆಂದು ರಮೇಶ ಮೊದಲು ಅರಿತಿದ್ದನೋ, ಕಲಿಸಲಾರಂಭಿಸಿದ ಮೇಲೆ ಅಷ್ಟು ಸುಲಭವೆಂದು ಭಾವಿಸಲಾಗಲಿಲ್ಲ; ಕಲೆಯನ್ನು ಕಲಿಯುವುದೂ ತಾನು ತಿಳಿದಿದ್ದಷ್ಟು ಸುಲಭವಲ್ಲವೆಂದು ಮಾಣಿಯ ಗ್ರಹಿಕೆಗೆ ಬರುತ್ತಾ ಬಂದಿತು. ಕಲೆಯ ಬಹಿರಂಗದ ಕೆಲವು ಸಾಮಾನ್ಯ ವಿಚಾರಗಳನ್ನು ಕಲಿಸಬಹುದು ಆದರೆ ಅದನ್ನು ಯುಕ್ತರೀತಿಯಲ್ಲಿ ಅನುಷ್ಠಾನಕ್ಕೆ ತಂದು ಉತ್ತಮ ಕೃತಿಯನ್ನಾಗಿ ಮಾರ್ಪಡಿಸುವುದು ಹೇಗೆ? ಸಜೀವ ನಿರ್ಜೀವ ಪ್ರಾಣಿ ವಸ್ತುಗಳ ಹೊರರೇಖೆಗಳಿಂದ ಕಲಾಶಿಕ್ಷಣ ಆರಂಭವಾಯಿತು. ಮೊದಲು ಸಣ್ಣ ಸಣ್ಣ ಎಲೆ, ಗಿಡ, ಬಳ್ಳಿಗಳ ಚಿತ್ರರಚನೆ. ಅನಂತರ ಅವುಗಳನ್ನೇ ಊಹೆಯಿಂದ ಬರೆದು ಜೀವಂತ ವಸ್ತುಗಳಿಗೂ ಊಹಾವಸ್ತುಗಳಿಗೂ ಇರುವ ತಾರತಮ್ಯವನ್ನು ಪರೀಕ್ಷಿಸುವುದು. ಮುಂದೆ ದೊಡ್ಡ ಮರಗಳನ್ನೂ ಅವುಗಳ ರೂಪಲಾವಣ್ಯವನ್ನೂ ಚಿತ್ರಿಸುವುದು. ಅನಂತರ ಅವುಗಳನ್ನೇ ನಿಸರ್ಗ ವರ್ಣಗಳಲ್ಲಿ ರಚಿಸಿ ಜೀವನಸಾದೃಶ್ಯ ಚಾಚೂ ತಪ್ಪದಂತೆ ಕಲೆಯಲ್ಲಿ ಛಟ್ಟಿಯಿಳಿಸುವುದು. ಹೀಗೆ ೨-೩ ವರ್ಷ ಶಿಕ್ಷಣ ಸಾಗಿತು. ಒಂದು

ದಿವಸ ಮಾಣಿಯ ಮನಸ್ಸಿನಲ್ಲಿ ಬಹಳ ದಿವಸಗಳಿಂದ ಕುದಿಯುತ್ತಿದ್ದ ಪ್ರಶ್ನೆ ಹೊರಬಿತ್ತು.

"ತಾವು ಹೇಳಿದಂತೆ ನಿಸರ್ಗಚಿತ್ರಗಳನ್ನೇ ಬರೆಯುತ್ತಿದ್ದೇನಲ್ಲಾ. ಈ ವಿಚಾರದಲ್ಲಿ ಒಂದು ಸಂಶಯವಿದೆ ಕೇಳಲೇ ?"

"ಕೇಳು."

"ತಾವು ಮನಸ್ಸಿಗೆ ಬೇಸರಮಾಡಿಕೊಳ್ಳಬಾರದು."

"ಆ ಚಿಂತೆ ಬೇಡ. ಧೈರ್ಯವಾಗಿ ಕೇಳು."

"ನಿಸರ್ಗವೇ ನಮ್ಮ ಮುಂದಿರುವಾಗ ಅದರ ಚಿತ್ರಗಳನ್ನು ಏತಕ್ಕೆ ಬರೆಯಬೇಕು ?"

"ನಿಸರ್ಗದಂತಹದೇ ಆದ ಸೌಂದರ್ಯವನ್ನು ನೀನು ಸೃಷ್ಟಿಸಬಲ್ಲೆ ಯೆಂಬುದನ್ನು ತೋರಿಸಲಿಕ್ಕೆ."

"ಆ ಕೆಲಸವನ್ನು ಫೋಟೋಯಂತ್ರ ನಿರ್ವಹಿಸುವುದಲ್ಲಾ."

"ಆದರೆ ಫೋಟೋಯಂತ್ರದಲ್ಲಿ ನಿಸರ್ಗದ ವಿವಿಧ ವರ್ಣವೈಖರಿ ಎಲ್ಲಿಂದ ಬರಬೇಕು ?"

"ಹಾಗಾದರೆ ನಾವು ಚಿತ್ರಿಸಬೇಕೆಂದಿರುವ ನಿಸರ್ಗದೃಶ್ಯದ ಫೋಟೋ ತೆಗೆದುಕೊಂಡು ಅದಕ್ಕೇ ಬಣ್ಣ ಹಾಕಿದರೆ ಆಗದೇನು ? ಹೊತ್ತು ಮಿಗುವುದು, ಕಾರ್ಯವೂ ಸಫಲವಾಗುವುದು."

"ಹಾಗೆ ಮಾಡಿದರೆ ಮನುಷ್ಯ ತನ್ನ ಕಲ್ಪನಾಶಕ್ತಿಯನ್ನು ಕಳೆದು ಕೊಂಡು ಯಂತ್ರಕ್ಕೆ ಅಧೀನನಾಗಿ ಬಿಡುತ್ತಾನೆ."

"ನಿಸರ್ಗವನ್ನೇ ಅನುಕರಿಸಿ ಮನುಷ್ಯ ತಾನೇ ಒಂದು ಯಂತ್ರ ವಾಗಿರುವಾಗ ಇನ್ನು ಬೇರೆ ಯಂತ್ರಕ್ಕೆ ಹೇಗೆ ಅಧೀನನಾಗುತ್ತಾನೆ."

ರಮೇಶನಿಗಿದು ನುಂಗಲಾರದ ತುತ್ತಾಯಿತು. ಅಂತರಂಗದಲ್ಲಿ ಸೂತ್ರರೂಪವಾಗಿ ಸುಳಿದಿದ್ದ ಸತ್ಯವನ್ನು ಅನುಭವದಿಂದ ತಾನೇ ತಿಳಿಯ ದಿದ್ದುದರಿಂದ ಮಾಣಿಗೆ ಹೇಳಲು ಹೆದರಿದ. ಯಾರಿಗೆ ಗುರುವಾಗಿ ಕಲೆಯನ್ನು ಬೋಧಿಸುತ್ತೇನೆಂದು ಹೊರಟನೋ ಆ ಬಾಲಕನಿಂದ ತನ್ನ ಕಲೆಯ ಆದಿ – ಅಂತ್ಯವನ್ನು ಅರಿಯಬೇಕಾಯಿತಲ್ಲಾ ಎಂದು ವಿಷಾದ ಗೊಂಡ. ಹಾಗೆಯೇ ಕಣ್ಣು ತಾನು ಚಿತ್ರಿಸುತ್ತಿದ್ದ 'ಯಮ – ನಚಿಕೇತ'

ಚಿತ್ರದ ಕಡೆ ಒಲಿಯಿತು. ಯಮನಂತಹ ಸರ್ವಜ್ಞನೂ ಏನೂ ಅರಿಯದ ನಚಿಕೇತನಂತಹ ಬಾಲಕನಿಂದ ಪರಾಜಯಗೊಂಡನಲ್ಲವೇ ?—ಜೆರೂಸಲಮ್ಮಿನ ಮಹಾ ಮಹಾ ಪಂಡಿತರು ಏನೂ ಅರಿಯದ ಯೇಸುವಿನ ತಿಳಿಯಾದ ಮಾತುಗಳಿಂದ ಪರಾಜಯಗೊಂಡರಲ್ಲವೇ ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡ.

ಮಾಣಿ ತನ್ನ ಕಲೆಯನ್ನು ಮನಸ್ಸಿನಲ್ಲಿಟ್ಟುಕೊಂಡು 'ಇದು ಕೇವಲ ಯಾಂತ್ರಿಕ ಕಲೆ'ಯೆಂಬ ಅರ್ಥದಲ್ಲಿ ಆ ಮಾರ್ಮಿಕ ನುಡಿಗಳನ್ನಾಡಿರಬಹುದೇ ? ತನ್ನನ್ನು ಅವಹೇಳನ ಮಾಡುವ ಉದ್ದೇಶದಿಂದ ಈ ವಾದವನ್ನು ಹೂಡಿರಬಹುದೇ ಎಂದು ಯೋಚಿಸಲಾರಂಭಿಸಿದ.

ರಮೇಶ ಚಿಂತೆಯ ಮಡುವಿನಲ್ಲಿ ಬಿದ್ದುದನ್ನು ಕಂಡು ಮಾಣಿ ಮೆಲ್ಲನೆ ಜಾರಿದ್ದ. ರಮೇಶ ಉದ್ವೇಗಭರಿತನಾಗಿ ತನ್ನ ಚಿತ್ರಗಳ ಕಟ್ಟನ್ನೆಲ್ಲಾ ಬಿಚ್ಚಿ ಒಂದೊಂದನ್ನಾಗಿ ಪರೀಕ್ಷಿಸಲಾರಂಭಿಸಿದ. ಹಾಗೆಯೇ ಮಾಣಿಯ ಚಿತ್ರಗಳನ್ನೂ ಪರೀಕ್ಷಿಸಲಾರಂಭಿಸಿದ. ತನ್ನ ಚಿತ್ರಗಳಲ್ಲಿನ ವರ್ಣವೈಖರಿ, ನೆರಳು ಬೆಳಕುಗಳ ಚಮತ್ಕಾರ ಮಾಣಿಯ ಕೃತಿಗಳಲ್ಲಿಲ್ಲದಿದ್ದುದನ್ನು ಕಂಡು ತುಸು ಸಮಾಧಾನಗೊಂಡ. 'ತಾನೆಲ್ಲಿ – ಅವನೆಲ್ಲಿ, ಅವನು ನನ್ನ ಪ್ರತಿಸ್ಪರ್ಧಿಯಾಗುವನೇ – ಆದರೇನು ಭಯ' ಎಂಬ ಭಾವನೆ ಸುಳಿಯಿತು. ಹಾಗೆಯೇ ಮಾಣಿಯ ಚಿತ್ರಗಳಲ್ಲಿ ಕೈಯಾಡಿಸುತ್ತಾ 'ಸಂದೇಶ'ವೆಂಬ ಕಾಲ್ಪನಿಕ ಚಿತ್ರದ ಕಡೆ ಮನಸ್ಸು ಓಡಿತು. 'ಶುದ್ಧ ಕಪ್ಪಾದ ಹಿನ್ನೆಲೆಯನ್ನು ಛೇದಿಸಿಕೊಂಡು ಒಂದು ಹಣತೆ ಮುಂದೆ ಮುಂದೆ ಬರುತ್ತಿದೆ. ಅದರ ಎದುರಿಗೆ ಚಿಕ್ಕಪ್ರಾಯದ ಒಬ್ಬ ತರುಣ ಆರ್ತನಾಗಿ ಅಂಗಲಾಚುತ್ತ ಕುಳಿತಿದ್ದಾನೆ. ಅವನ ಅಕ್ಕಪಕ್ಕದಲ್ಲಿ ಪಾಂಡವ ಕೌರವರ ಸೈನ್ಯಗಳಂತೆ ಸಾಲುಗಟ್ಟಿ ಎಲ್ಲಾ ವಯಸ್ಸಿನ ಸ್ತ್ರೀಪುರುಷರು ನಿಂತಿದ್ದಾರೆ.' ಸಂದೇಶವನ್ನು ನೋಡುತ್ತ ನೋಡುತ್ತ ರಮೇಶನ ಮೈಕೈಯೆಲ್ಲಾ ಬೆವರಲಾರಂಭಿಸಿತು. ಹೊಟ್ಟೆಯಲ್ಲಿ ಈರ್ಷೆಯ ಕಿಚ್ಚೆದ್ದಿಸಿ ರಮೇಶನ ಅಂಗಾಗಂಗಳನ್ನು ಸುಡಲಾರಂಭಿಸಿತು. ರೋಷದಿಂದ ದೇಹಾದ್ಯಂತವೂ ಕಂಪಿಸತೊಡಗಿತು. ತನ್ನ ಮುಂದಿನ ಹುಡುಗ ತನ್ನನ್ನು ಮೀರಿಸುವುದೇ ? ತನ್ನ ಕಲೆಯನ್ನು ಪ್ರಶ್ನಿಸುವುದೇ ?

ತನ್ನ ಯೋಗ್ಯತೆಯನ್ನು ಪ್ರತಿಭಟಿಸುವುದೇ? ಕಲಾಸಮ್ರಾಟ ತಾನೇ ಎಂಬ ಮಾಯಾಪ್ರಪಂಚದ ಭ್ರಮರಕೀಟವಾಗಿದ್ದ ರಮೇಶನಿಗೆ ಕೂಡಲೇ ಮನುಷ್ಯತ್ವ ಪ್ರಾಪ್ತವಾದ ಹಾಗಾಯಿತು. ಮನಸ್ಸಿನ ಕನ್ನಡಿಯ ಮೇಲೆ ಒಂದೊಂದಾಗಿ ತನ್ನ ಚಿತ್ರವೊಂದು, ಮಾಣಿಯ ಚಿತ್ರವೊಂದು ಸುಳಿಯಲಾರಂಭಿಸಿತು. ರೋಷ ಕ್ಷಣಕ್ಷಣಕ್ಕೂ ಏರಲಾರಂಭಿಸಿತು. ಮನಸ್ಸಿನ ಈ ಅಶಾಂತ ವಿಪ್ಲವವನ್ನು ತಡೆಯಲಾರದೆ ಬೆಂಕಿಕಡ್ಡಿ ಗೀರಿ 'ಸಂದೇಶ'ಕ್ಕೆ ಅಗ್ನಿಸ್ಪರ್ಶ ಮಾಡಿಸಿಬಿಟ್ಟ. ಒಂದೇ ಅರೆಕ್ಷಣ....ಸಂದೇಶ ಬೂದಿ ಬೂದಿಯಾಗಿ ಮುಂದೆ ಬಿದ್ದಿತು. ಅದನ್ನು ದಿಟ್ಟಿಸಿ ನೋಡಿ ವಿಜಯೋತ್ಸಾಹದಿಂದ ನಕ್ಕ. ತಾನೇ ಗೆದ್ದೆನೆಂದು ಭಾವಿಸಿಕೊಂಡ.

ಕತ್ತೆತ್ತಿ ನೋಡುವುದೇ ತಡ. ಎಲ್ಲೆಲ್ಲಿಯೂ 'ಸಂದೇಶ'ದ ಪ್ರತಿಗಳು ಮೆರೆಯಲಾರಂಭಿಸಿದವು. ಗೋಡೆಯ ಮೇಲೆಯೂ ಅದೇ – ಕನ್ನಡಿಯಲ್ಲಿಯೂ ಅದೇ – ಗೋಡೆಯ ಮೇಲೆ ನೇತುಹಾಕಿದ್ದ ಪ್ರತಿಯೊಂದು ಕಟ್ಟಿನಲ್ಲಿಯೂ ಅದೇ ಚಿತ್ರ. ಈ ನೋಟದಿಂದ ರಮೇಶ ಅವಾಕ್ಕಾಗಿ ಹೋದ. ಇದು ಎಂತಹ ಹಿಂಸೆ – ಎಂತಹ ಶಿಕ್ಷೆ ಎಂದು ಕಣ್ಣು ಮುಚ್ಚಿ ತಲೆಯ ಮೇಲೆ ಕೈ ಹೊತ್ತು ಆರಾಮಾಸನದ ಮೇಲೆ ಕುಳಿತ. ಸ್ವಲ್ಪ ಹೊತ್ತು ಕಳೆಯಲು ತಲೆ ತಿಳಿಯಾಗುತ್ತ ಬಂದಿತು. ಬಗ್ಗಡದಂತಹ ಕಶ್ಮಲ ಭಾವನೆಗಳೆಲ್ಲಾ ಪಾತಾಳಕ್ಕೆ ಇಳಿದು ತಿಳಿಯಾದ, ಶುಭ್ರವಾದ, ಪವಿತ್ರವಾದ ಭಾವನೆಗಳು ಹೊಳೆಯಲಾರಂಭಿಸಿದವು. ಕಣ್ಣಿನಲ್ಲಿ ಧಾರೆಧಾರೆಯಾಗಿ ದುಃಖಾಶ್ರು ಹರಿಯಿತು. 'ಎಂತಹ ನೀಚ ಕೆಲಸವನ್ನು ಮಾಡಿದೆ. ನನ್ನ ಶಿಷ್ಯನ ಅಭ್ಯುದಯವನ್ನು ಸಹಿಸದೆ ಹೋದೆನಲ್ಲಾ. ನನ್ನ ವಿದ್ಯೆ ಇವನ ಮೂಲಕ ವರ್ಧಿಸುವುದೆಂದು ಶಾಂತನಾಗದೆ ತುಚ್ಛವಾದ ಈರ್ಷೆಯ ಕೂಪಕ್ಕೆ ಬಿದ್ದು 'ಸಂದೇಶ'ವನ್ನು ನಾಶಗೊಳಿಸಿದೆನಲ್ಲಾ' ಎಂದು ರೋಧಿಸಲಾರಂಭಿಸಿದ.

ಮಾಣಿ ಅಂದಿನ ಪಾಠಕ್ಕಾಗಿ ಅಲ್ಲಿಗೆ ಬಂದಿದ್ದುದರ ಅರಿವೇ ರಮೇಶನಿಗಾಗಲಿಲ್ಲ. ತನ್ನ ಗುರು ತಲೆಯಮೇಲೆ ಕೈಹೊತ್ತು ಹೀಗೆ ದುಃಖಿಸುತ್ತ ಕುಳಿತಿದ್ದುದರ ಮರ್ಮವಾದರೂ ಮಾಣಿಗೆ ಗೊತ್ತಾಗಲಿಲ್ಲ. ಎದುರಿಗೆ ಬಿಚ್ಚಿದ ತನ್ನ ಮತ್ತು ರಮೇಶನ ಚಿತ್ರಸಂಗ್ರಹ. 'ತನ್ನಿಂದೇ

ನಾವರೂ ಅಪಚಾರ ಸಂಭವಿಸಿತೇ ? ತಾನು ಪ್ರಶ್ನೆ ಕೇಳಿದ್ದು ತಪ್ಪಾಯಿತೇ ?' ಎಂದು ಎಷ್ಟು ಬಗೆಯಾಗಿ ಭಾವಿಸಿದರೂ ಸಮಸ್ಯೆ ಪರಿಹಾರವಾಗಲಿಲ್ಲ. ಕೊನೆಗೆ ಧೈರ್ಯಮಾಡಿಕೊಂಡು ರಮೇಶನ ಬಳಿಗೆ ಬಂದು

"ಸಾರ್ ಸಾರ್"

"ಯಾರು ? ಯಾರದು ?"

"ನಾನು ಸಾರ್. ಮಾಣಿ. ಪಾಠಕ್ಕೆ ಬಂದಿದ್ದೇನೆ."

ರಮೇಶ ಕತ್ತೆತ್ತಿ ನೋಡಿದ. ದೈನ್ಯವೇ ಮೂರ್ತಿವೆತ್ತಿ ಬಂದಂತೆ ನಿಂತಿದ್ದ ಮಾಣಿಯನ್ನು ಕಂಡು ಗಂಟಲು ಬಿಗಿದು ಬಂದಿತು. ತನ್ನ ದುಃಖವನ್ನು ಮಾತಿನಿಂದ ತಿಳಿಸಲಾಗದೆ ಅವನನ್ನು ಅಪ್ಪಿ ಗಟ್ಟಿಯಾಗಿ ಅಳಲಾರಂಭಿಸಿದ. ಮಾಣಿಯ ಎಳೆಮನಸ್ಸಿಗೆ ಈ ಶೋಕವಾರಿಧಿಯ ಉದ್ದೇಶ ಅರ್ಥವಾಗಲಿಲ್ಲ. ಗುರುವಿನ ದುಃಖಕ್ಕೆ ಮನಕರಗಿ ತಾನೂ ಅಳಲಾರಂಭಿಸಿದ. ಸ್ವಲ್ಪ ಹೊತ್ತು ಹೀಗೆ ಕಳೆಯಲು ರಮೇಶ ಧೈರ್ಯ ಮಾಡಿಕೊಂಡು

"ಕ್ಷಮಿಸು ಮಾಣಿ. ನಾನು ಮಹಾಪರಾಧಿ. ನಿನ್ನ ವಿಚಾರದಲ್ಲಿ ಬಹಳ ಅನ್ಯಾಯ ಮಾಡಿರುವೆ."

"ಎಂತಹ ಮಾತು ಸಾರ್. ನೀವು....ಅನ್ಯಾಯ....ರಾಮ ರಾಮ.... ಸರಿಯಾಗಿ ಹೇಳಿ ಸಾರ್....ನನಗೊಂದೂ ಬಗೆಹರಿಯುವುದಿಲ್ಲ."

"ಹೊಟ್ಟೆಯ ಕಿಚ್ಚಿನಿಂದ ನಿನ್ನ....'ಸಂದೇಶ'....ಚಿತ್ರವನ್ನು ಸುಟ್ಟೆ. ನೀನು ನನ್ನ ಪ್ರತಿಸ್ಪರ್ಧಿಯಾಗುವೆಯೆಂಬ ಭಯದಿಂದ....ಕ್ಷಮಿಸು."

"ಇಷ್ಟೇ ತಾನೆ. ಅದು ಎಂದಿದ್ದರೂ ತಮ್ಮದು ತಾನೆ. ತಮ್ಮ ಚಿತ್ರ ತಾವು ಸುಟ್ಟಹಾಗಾಯಿತು. ಅದಕ್ಕೂ ಉತ್ತಮವಾದುದನ್ನು ಬರೆಸೇ ಬರೆಸು ತ್ತೀರಿ. ಇದಕ್ಕಿಷ್ಟು ಚಿಂತೆಯೇ ?" ಎಂದು ಸಮಾಧಾನ ಹೇಳಿ ರಮೇಶ ನನ್ನು ಮೂರ್ತಿಯಲ್ಲಿಗೆ ಕಳುಹಿಸಿ ತಾನೇ ಅಭ್ಯಾಸಕ್ಕೆ ಕುಳಿತ. ಮನಸ್ಸು ಮರ್ಕಟದಂತೆ ಎತ್ತೆತ್ತಲೋ ಹೋಗುವುದೇ ವಿನಾ ಅಂದು ಕುಂಚದಮೇಲೆ ನಿಲ್ಲದು. ಜೀಸರದಿಂದ ಕುಂಚವನ್ನು ಒಂದೆಡೆಗೆಸೆದು 'ನಾನು ಪ್ರತಿಸ್ಪರ್ಧಿ. ನನ್ನ ಮೇಲೆ ಹೊಟ್ಟೆಯಕಿಚ್ಚು' ಎಂದು ನಿಟ್ಟುಸಿರುಬಿಟ್ಟ. ಅಂದಿನ ಅಭ್ಯಾಸ ಅಲ್ಲಿಗೇ ನಿಂತಿತು.

೪

ಎಂದಿಗಿಂತ ವಿಶೇಷವಾದ ರಂಗಿಸಿಂದ ಪಿಳ್ಳೆಪ್ಪನ ನಾಗಸ್ವರ ವಾದನ ನಡೆದಿದ್ದರೂ ಗೆಳೆಯರಿಬ್ಬರ ಮನಸ್ಸು ಮಾತ್ರ ರಂಗೇರಿರಲಿಲ್ಲ. ಜನಗಳು ಸುಳಿದಾಡುತ್ತಿದ್ದ ಗಲಭೆಯ ತಾಣವನ್ನು ಬಿಟ್ಟು ಮಲ್ಲಿಕಾರ್ಜುನ ಸ್ವಾಮಿಯ ದೇವಾಲಯದ ಮುಂದಿನ ಜಗುಲಿಯ ಮೇಲೆ ಇಬ್ಬರೂ ಕುಳಿತರು.

ಬೆಂಗಳೂರು ನಗರದಲ್ಲಿ ಬಸವನಗುಡಿ ವಿಸ್ತರಣ ರಮ್ಯ ಪ್ರದೇಶಗಳಲ್ಲಿ ಒಂದು. ಅದರಲ್ಲಿಯೂ 'ಸುಖಸೋಪಾನ'ವೆಂದು ಹೆಸರು ಪಡೆದಿದ್ದ ಗುಡ್ಡಗಳ ಬಯಲು ಸುತ್ತಲಿನ ನೈಸರ್ಗಿಕ ಶೋಭೆಗೆ ಒಂದು ಪ್ರಸ್ತಾವನೆ ಹಾಕಿ ಕೊಟ್ಟಂತಿತ್ತು. ನೊಂದವರಿಗೆ, ಸುಖದ ಅಜೀರ್ಣತೆಯನ್ನು ಹೋಗಲಾಡಿಸಿಕೊಳ್ಳಲಿಚ್ಛಿಸುವವರಿಗೆ, ಕಣಸುಗಾರರಿಗೆ, ಗಲಭೆಯಿಂದ ದೂರವಾಗಲಿಚ್ಛಿಸುವ ಶಾಂತಿಪ್ರೇಮಿಗಳಿಗೆ ಅದು ಮಾತೃಮಂದಿರ ವಾಗಿತ್ತು. ಗುಡ್ಡಗಳ ನಡುವೆ ನಾಲ್ಕೈದು ನೂರು ಅಡಿ ಎತ್ತರವಿರುವ ಒಂದು ಗುಡ್ಡ. ಅದನ್ನು ಚೊಕ್ಕಟಗೊಳಿಸಿ ಎಂಟು ಹತ್ತು ಜನ ಕುಳಿತು ಕೊಳ್ಳಲು ನಗರಸಭೆಯವರು ಅಣಿಮಾಡಿದ್ದರು. ನಗರದ ದೂರ ದೃಶ್ಯವನ್ನು ನೋಡಲು ಅದೇ ಉತ್ತಮ ಸ್ಥಳವೆಂದು ಹೆಸರಾಗಿದ್ದಿತು. ನಗರ ಸಭೆ ಯವರು ಪ್ರತಿ ಭಾನುವಾರವೂ ಅಲ್ಲಿ ನಾಗಸ್ವರದ ವ್ಯವಸ್ಥೆಯನ್ನಿಡಿಸಿ ಆ ತಾಣದ ಖ್ಯಾತಿಯನ್ನು ಹೆಚ್ಚುಗೊಳಿಸಿದ್ದರು. ಜನತೆಗೆ ಅದು ಒಮ್ಮೊಮ್ಮೆ ನಾಗಸ್ವರವನ್ನು ಸುಖವಾಗಿ ಕೇಳಿ – ಮರೆತು ಹೋಗುವ ಜಾಗ ವಾಗಿದ್ದಿತು.

ಆದರೆ ಮೂರ್ತಿ, ರಮೇಶರ ಜೀವನದಲ್ಲಿ 'ಸುಖಸೋಪಾನ' ದೊಡ್ಡ ಪಾತ್ರವನ್ನು ಅಭಿನಯಿಸಿದ್ದಿತು. ಅವರ ಗೆಳೆತನ, ಪ್ರೇಮ ಸಿದ್ಧಿಸಿ ದುದಲ್ಲೇ; ಅವರ ದೊಡ್ಡ ಆಶೆಗಳು ಮೊಳಕೆಗೊಂಡುದಲ್ಲೇ; ಅವರ ಮನೋವ್ಯಾಪಾರಗಳು ಉತ್ತಮ ಮುಕ್ತಾಯಗಳನ್ನು ಕಾಣುತ್ತಿದ್ದುದೂ ಅಲ್ಲೇ. ದುರ್ಭರವಾದ ಮನಸ್ಸಿಗೆ ಅಸಹನೀಯ ಯಾತನೆ ಮುತ್ತಿಗೆ ಹಾಕಿ ದಾಗ ರಮೇಶನಿಗೆ ಹೊಳೆಯುತ್ತಿದ್ದುದು ಮೂರ್ತಿ – ಸುಖ ಸೋಪಾನಗಳ ಸಖ್ಯ.

ದೇವಗಾಂಧಾರಿ ಕೀರ್ತನೆ ಮುಗಿಸಿ ಪಿಳ್ಳಪ್ಪ ಸಾರಮತಿಯ ಕೀರ್ತನೆ ಆರಂಭಿಸಿದ್ದ. ಕವಿ ಯಾವ ಮಹಾ ವಿಪ್ಲವಕ್ಕೆ ಈಡಾದ ಅಂತರಂಗವನ್ನು ಅದರಿಂದ ಪಾರುಮಾಡಲೆತ್ನಿಸಿ ಸಾರಮತಿಯ ಸಾಧನ ದಿಂದ ಕೊಂಚಮಟ್ಟಿಗಾದರೂ ಕೃತಕೃತ್ಯನಾಗಿದ್ದನೋ ಆ ಮಹಾ ಪ್ರಯತ್ನವನ್ನು ಕಲಾವಿದ ಪಿಳ್ಳಪ್ಪ ತನ್ನ ನಾಗಸ್ವರದಿಂದ ಹೊರತೋರು ತ್ತಿದ್ದ. ಆದರೆ ಅದರಲ್ಲಿಯೂ ಒಂದು ಬಗೆಯ ಕೃತ್ರಿಮತೆ. ಒಂದೆಡೆ ಸಾಧನೆಯ ಸಕಲ ನೋವುಗಳನ್ನೂ ಅನುಭವಿಸುತ್ತಾ ಕವಿ ಒಂದು ನೋವಿಗೆ ಉಚ್ಚಾರಣೆಯನ್ನಿತ್ತಿದ್ದ ಭಾವ ಪಿಳ್ಳಪ್ಪನ ನಿರ್ಲಿಪ್ತ ಭಾವನೆಗೆ ಕೇವಲ ಒಂದು ಕಲಾಮೂರ್ತಿಯಾಗಿ ಕಂಡುಬಂದಿತ್ತು. ತ್ಯಾಗರಾಜನ ಉತ್ಕ್ರಾಂತಿಯಲ್ಲಿ ಆ ನೋವು ಒಂದಂಶವಾಗಿತ್ತು. ಆದರೆ ಪಿಳ್ಳಪ್ಪನಿಗೆ ಆ ನೋವೇ ಒಂದು ಉತ್ಕ್ರಾಂತಿಯಾಗಿತ್ತು. ಅದೇ ಆದಿ, ಅದೇ ಅಂತ್ಯ. ನೋವು ಯಾವುದಕ್ಕೆ ಅಧೀನವೆಂಬುದರ ಕಡೆಗೆ ಅವನ ಲಕ್ಷ್ಯವಿಲ್ಲ. ನೋವು - ಸಾರಮತಿರಾಗಗಳ ಮೇಳ ಹೇಗಾಗುವುದೆಂಬುದರ ಕಡೆ ಅವನ ಲಕ್ಷ್ಯ.

ಸಾರಮತಿ ಮುಗಿದೊಡನೆ ಗೆಳೆಯರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಮಾತನಾಡದೆ ಒಬ್ಬನ ಮನಸ್ಸು ಮತ್ತೊಬ್ಬನಿಗೆ ಗೊತ್ತಾದಂತಿತ್ತು. ಮೂರ್ತಿ ಮನಸ್ಸು ಬೇರೆಕಡೆ ತಿರುಗಲೆತ್ನಿಸಿ

"ಸಿಗರೇಟು ಇದೆಯೇನೋ ರಮೇಶ."

ಸಿಗರೇಟನ್ನಿತ್ತು ತಾನೂ ಒಂದನ್ನು ಹಚ್ಚಿ ಕುಳಿತ. ಮೌನ ಮುದ್ರೆಯನ್ನು ಒಡೆಯಲು ನಿಶ್ಚಯಿಸಿದ್ದ ಮೂರ್ತಿಯೇ ಮೆಲ್ಲನೆ ಮಾತು ತೆಗೆದ

"ಸಾರಮತಿ ಹೇಗಿತ್ತು?"

"ಚೆನ್ನಾಗಿತ್ತು."

"ಚೆನ್ನಾಗಿತ್ತು ಸರಿ. ನಿನಗೆ ಹೇಗಿತ್ತು ಎಂದು ಕೇಳಿದೆ."

"ಹೇಳಿದೆನಲ್ಲಾ. ನನಗೂ ಚೆನ್ನಾಗಿಯೇ ಇತ್ತು."

"ನಾಳಿನಿಂದ ನಿನ್ನ ಚಿತ್ರಗಳಿಗೂ ಹಾಗೆಯೇ ಉತ್ತರ ಹೇಳುತ್ತ ಬರುತ್ತೇನೆ. ಆಗ ಏನನ್ನುವಿಯೋ ನೋಡೋಣ."

"ಚಿತ್ರಗಳ ಮಾತುಬೇರೆ—ಸಂಗೀತದ ಮಾತುಬೇರೆ ಮೂರ್ತಿ. ನೀನು ಸುಮ್ಮನೆ ಮೊಂಡು ವ್ಯಾಜ್ಯ ಹೂಡಬೇಡ."

"ಅದು ಹೇಗಯ್ಯಾ ಬೇರೆ ಬೇರೆ ?"

"ನೋಡು ಸಂಗೀತ ಕನಸಿನ ಕನ್ಯೆಯಂತೆ. ಒಮ್ಮೆ ಸುಳಿದು ಮರು ಕ್ಷಣವೇ ಮಾಯವಾಗುತ್ತಾಳೆ; ಆದರೆ ಚಿತ್ರಕಲೆ ಹಾಗಲ್ಲ. ಯಾವಾಗಲೂ ಕಣ್ಣು ಮುಂದೆಯೇ ಜೀವಂತವಾಗಿ ಇರುತ್ತದೆ."

"ಅಂದರೆ ಚಿತ್ರಕಲೆಗೆ ಒಂದು ಅಸ್ತಿತ್ವವಿರುವುದರಿಂದ ಅದು ಸಂಗೀತ ಕ್ಕಿಂತಲೂ ದೊಡ್ಡದು ಎಂದು ಹೇಳಿದ ಹಾಗಾಯಿತಲ್ಲವೇ ?"

"ಅಹುದು."

"ಹಾಗಾದರೆ ಶಿಲ್ಪಕಲೆಗೆ ಇನ್ನೂ ಶಾಶ್ವತವಾದ ಅಸ್ತಿತ್ವವುಂಟಲ್ಲ. ಗೆದ್ದಲು ಹಿಡಿದರೆ, ಹುಳುಹುಪ್ಪಟೆಗಳು ಮುತ್ತಿದರೆ ನಿನ್ನ ಚಿತ್ರಗಳೆಲ್ಲಾ ಧ್ವಂಸ. ಶಿಲ್ಪಕಲೆಗೆ ಆ ಭಯವೇನೂ ಇಲ್ಲವಲ್ಲಾ. ಹಾಗಾದರೆ ಚಿತ್ರಕ್ಕಿಂತಲೂ ಶಿಲ್ಪ ಉತ್ತಮವೆಂದಹಾಗಾಯಿತೇನು ?"

"ಉಂಟೇ...."

ಮುಂದೆ ರಮೇಶನಿಗೆ ಮಾತು ಹೊರಡದ ಹಾಗಾಯಿತು. ಚಿತ್ರ ಕಲೆ ತನ್ನದೆಂಬ ಅಭಿಮಾನದಿಂದ ತಾನು ಸತ್ಯದ ಮುಖಕ್ಕೆ ಮುಸುಕು ಹಾಕುತ್ತಿರುವುದರ ಅರಿವಾಯಿತು.

"ನೋಡು ರಮೇಶ. ಅಭಿಮಾನ ಬಿಟ್ಟು ಮಾತನಾಡಬೇಕಾದರೆ ಸಂಗೀತದ ಮುಂದೆ ಕಲೆಯೇ ಇಲ್ಲ. ಎಲ್ಲ ಕಲೆಯ ಉದ್ದೇಶವೂ ರಸಾನು ಭವವನ್ನುಂಟುಮಾಡಿ ಕೊಡುವುದೆಂದು ಒಪ್ಪಿಕೊಂಡರೆ ಸಂಗೀತದಷ್ಟು ಸುಲಭವಾಗಿ, ಸೂಕ್ಷ್ಮವಾಗಿ, ಕ್ಷಿಪ್ರವಾಗಿ ರಸಾನುಭವವನ್ನು ಮತ್ತೆ ಯಾವಕಲೆಯೂ ಉಂಟುಮಾಡಿಕೊಡುವುದಿಲ್ಲ. ಕಣ್ಣಿಲ್ಲದವನಿಗೆ ಚಿತ್ರ ಶಿಲ್ಪಕಲೆಗಳಿಂದೇನು ಪ್ರಯೋಜನ? ಕಿವಿಯಿಲ್ಲದವನಿಗೆ ಕವಿತೆಯಿಂದೇನು ಪ್ರಯೋಜನ? ಚಿತ್ರ, ಶಿಲ್ಪ, ಕವನಗಳೆಲ್ಲಾ ಮೊದಲು ಬುದ್ಧಿಯ ಮಾರ್ಗ ವಾಗಿ ಒಂದೇ ರಸಾನುಭವವನ್ನುಂಟುಮಾಡಿಕೊಡುತ್ತವೆ. ರಸಮಂದಿರದ ಪೂಜಾರಿಯಾಗಿ ಬುದ್ಧಿ ಕುಳಿತು ತನಗೆ ಬೇಕಾದುವನ್ನು ಒಳಗೆ ಬಿಡು ತ್ತದೆ, ಬೇಡದುದನ್ನು ಹೊರಗೇ ನಿಲ್ಲಿಸುತ್ತದೆ. ಆದರೆ ಸಂಗೀತದ ವಿಚಾರ

ಹಾಗಲ್ಲ. ಹೆಲನ್ ಕೆಲರ್ ಅಂತಹ ಅಂಧ, ಮೂಕ, ಬಧಿರ ಹೆಣ್ಣು ಮಗಳೂ ಅದರ ಸೌಖ್ಯವನ್ನು ಅನುಭವಿಸಬಲ್ಲಳು. ಸಂಗೀತದ್ದು ಕೇವಲ ರಸಪ್ರಪಂಚ, ಮನಸ್ಸಿನ ಮೇಲೆ ಅದು ನೇರವಾಗಿ ಪರಿಣಾಮ ಮಾಡುತ್ತದೆ. ಮನಸ್ಸಿನಲ್ಲಿ ಸುಪ್ತವಾಗಿರುವ ಚೇತನಗಳನ್ನು ಹೊಡೆದೆಬ್ಬಿಸುತ್ತದೆ. ಅದಕ್ಕೇ ಸಂಗೀತವನ್ನು ಪರಮೋತ್ಕೃಷ್ಟ ಕಲೆಯೆಂದು ಎಲ್ಲ ಮಹನೀಯರೂ ಒಪ್ಪಿ ಕೊಂಡಿರುವುದು."

"ಹಾಗಾದರೆ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವುದೇ ಕಲೆಗಳ ಉದ್ದೇಶವೆನ್ನುತ್ತೀಯೇನು ?"

"ಮನಸ್ಸಿಗೂ ಆನಂದಕ್ಕೂ ಸೇತುವೆ ಕಟ್ಟುವುದು ಕಲೆಗಳ ಕೆಲಸ. ಕಲೆಗಳು ಆನಂದವನ್ನೇ ಕೊಡಬೇಕಾದ್ದಿಲ್ಲ; ಕೊಡುವುದೂ ಇಲ್ಲ. ಆನಂದ ವನ್ನು ಅನುಭವಿಸುವ ಯೋಗ್ಯತೆಯನ್ನು ಮನಸ್ಸಿಗೆ ಉಂಟುಮಾಡಿ ಕೊಡುತ್ತವೆ."

"ಪಂಚೇಂದ್ರಿಯಗಳಿಗುಂಟಾಗುವ ಆನಂದವನ್ನು ನೀನು ಆನಂದ ವೆಂದು ಒಪ್ಪುವುದಿಲ್ಲವೋ ?"

"ಇಲ್ಲ. ಖಂಡಿತವಾಗಿಯೂ ಒಪ್ಪುವುದಿಲ್ಲ."

"ಹಾಗಾದರೆ ಪಂಚೇಂದ್ರಿಯಗಳ ವ್ಯಾಪಾರವೇನು ?"

"ದೇಹಕ್ಕೆ ಜೀವಂತ ಸ್ಥಿತಿಯನ್ನುಂಟುಮಾಡುವ ಪ್ರಾಪಂಚಿಕ ವ್ಯವಹಾರ."

"ಸರಿ. ಪಂಚೇಂದ್ರಿಯಗಳಿಗೂ ಆನಂದವುಂಟಾಗುವುದಲ್ಲಾ-ಅದ ಕ್ಕೇನು ಹೇಳುವೆ ?"

"ಹಾಗಂದರೇನು. ನಿನ್ನ ಪ್ರಶ್ನೆಯನ್ನು ಸ್ವಲ್ಪ ವಿಶದೀಕರಿಸು ರಮೇಶ್."

"ಈಗ ನೋಡು ಸುಂದರಳಾದ ಒಬ್ಬ ತರುಣಿಯನ್ನು ನೋಡಿದರೆ ಕಣ್ಣು ತಣಿಯುತ್ತದೆ; ಉತ್ತಮವಾದ ಮಲ್ಲಿಗೆ, ಜಾಜಿ, ಚಂಪಕಗಳನ್ನು ಮೂಸಿದರೆ ನಾಸಿಕ ಅರಳುತ್ತದೆ; ರುಚಿರುಚಿಯಾದ ಭಕ್ಷ್ಯಭೋಜ್ಯಗಳನ್ನು ಊಟಮಾಡಿದರೆ ಜಿಹ್ವೆ ಹಿಗ್ಗುತ್ತದೆ. ಇವೆಲ್ಲವೂ ಆನಂದವೆನಿಸಿಕೊ ಳ್ಳುವುದಿಲ್ಲವೇನು ?"

"ನೀನು ಬಹಳ ದೊಡ್ಡ ವಿಷಯಕ್ಕೆ ಬಂದೆ ರಮೇಶ್. ಯಾವ ವಿಷಯವನ್ನು ನಾನಿನ್ನೂ ಅನ್ವೇಷಿಸುತ್ತಿದ್ದೇನೆಯೋ ಅದರ ವಿಚಾರವೇ ಕೇಳುತ್ತಿರುವೆ. ನನಗೆ ತಿಳಿದಿರುವಷ್ಟು ಹೇಳುತ್ತೇನೆ. ಹೆಚ್ಚು ಬೇಕಾದರೆ ಇಬ್ಬರೂ ಬೇರೊಬ್ಬರಲ್ಲಿಗೆ ಹೋಗಬೇಕು. ಆಗಬಹುದೋ ?"

"ಹಾಗೆಯೇ ಆಗಲಿ."

"ದೇಹಕ್ಕೆ ಹೇಗೆ ಕಣ್ಣು, ಕಿವಿ, ಮೂಗು, ಬಾಯಿಗಳುಂಟೊ ಹಾಗೆಯೇ ಮನಸ್ಸಿಗೂ ಕಣ್ಣು, ಕಿವಿ, ಮೂಗು, ಬಾಯಿಗಳುಂಟು. ಆದರೆ ದೇಹದ ದೃಷ್ಟಿ ಬೇರೆ; ಮನಸ್ಸಿನ ದೃಷ್ಟಿ ಬೇರೆ. ಒಂದು ಹೆಣ್ಣು ಬಹಳ ರೂಪವತಿಯಾಗಿದ್ದರೆ ದೇಹಕ್ಕೆ ಅಷ್ಟೇ ಸಾಕು. ಆಕೆಯನ್ನು ರೂಪವತಿ-ಸುಂದರಿ ಎಂದು ಅದು ಒಪ್ಪಿಕೊಂಡು ಬಿಡುತ್ತದೆ. ಆದರೆ ಮನಸ್ಸು 'ಆಕೆ ಅಂತರಂಗ ಪರಿಶುದ್ಧಳೇ? ಹೊರಗಣ ಸೌಂದರ್ಯ ಒಳಗೂ ಇದೆಯೇ? ಗುಣಾಢ್ಯಳೇ?' ಎಂಬ ಪ್ರಶ್ನೆಗಳನ್ನು ಕೇಳಿ ಅವುಗಳಿಗೆ ಸದುತ್ತರ ದೊರೆತರೆ ಆಕೆಯನ್ನು ರೂಪವತಿ ಎಂದು ಒಪ್ಪಿಕೊಳ್ಳುತ್ತದೆ. ಮನಸ್ಸು ಕೇಳುವ ಈ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರ ಹೇಳುವ ಹೆಣ್ಣು ನೋಡುವುದಕ್ಕೆ ರೂಪಸಿಯಾಗಿಲ್ಲದಿದ್ದರೂ ಅದು ಆಕೆಯನ್ನು ರೂಪವತಿ ಎಂದು ಒಪ್ಪಿಕೊಳ್ಳುತ್ತದೆ. ಹೊರಗಣ ಅಂದಚೆಂದಗಳಿಗೆ ಮನಸ್ಸು ಮರುಳಾಗುವುದಿಲ್ಲ. ಇದು ಶಾಶ್ವತವಾದ, ಪರಿಣಾಮಕಾರಿಯಾದ ರೂಪುಲಾವಣ್ಯಗಳನ್ನು ತೋರುತ್ತದೆ. ಈ ಶಾಶ್ವತತೆಯನ್ನು ಯಾವುದು ತನ್ನಲ್ಲಿ ಮೂರ್ತೀಭೂತವಾಗಿ ಮಾಡಿದೆಯೋ, ಮಾಡಲೆತ್ನಿಸುತ್ತದೆಯೋ ಅದನ್ನೇ 'ಉತ್ತಮಕಲೆ' ಯೆಂದೂ, ಅದರ ವ್ಯಾಪಾರವನ್ನೇ 'ಆನಂದ' ವೆಂದೂ ತಿಳಿದವರು ಕರೆಯುವುದು."

"ಹಾಗಾದರೆ ಕಲೆಗೂ ಎರಡು ರೂಪ ಬಂದ ಹಾಗಾಯಿತಲ್ಲ ದೇಹದ ಕಲೆ–ಮನಸ್ಸಿನ ಕಲೆ."

"ಹೌದು. ಒಂದು ಪ್ರತ್ಯಕ್-ರೂಪ ಅದನ್ನೇ ಆದರ್ಶ-ಸಂಪ್ರದಾಯವೆಂದೂ, ಇನ್ನೊಂದು ಪರಾಕ್-ರೂಪ ಅದನ್ನು ಸಹಜ-ಸಂಪ್ರದಾಯವೆಂದೂ ಕರೆಯುವುದು."

"ನೀನು ಹಾಗಾದರೆ ಸಹಜ-ಸಂಪ್ರದಾಯವನ್ನು ಕೀಳೆಂದು ಭಾವಿಸುತ್ತೀಯೇನು ?"

"ಇಲ್ಲ, ಆದರೆ ಆದರ್ಶ-ಸಂಪ್ರದಾಯದಷ್ಟು ಉತ್ತಮವೆಂದು ಭಾವಿಸುವುದಿಲ್ಲ. ಈಗ ನಿನ್ನ ಸಮಸ್ಯೆ ಬಗೆಹರಿದಿರಬೇಕು ರಮೇಶ್. ನಿನಗೂ ಮಾಣಿಗೂ ಬಂದ ಅಂತರವೇ ಇದು. ನಿನ್ನದು ಸಹಜ-ಮಾರ್ಗ, ಅವನದು ಆದರ್ಶ-ಮಾರ್ಗ."

"ನನ್ನತಪ್ಪು ಗೊತ್ತಾಯಿತು. ಅಪರಾಧವನ್ನು ನೀನು ಕ್ಷಮಿಸಬೇಕು ಮೂರ್ತಿ."

"ಅಂತಹದೇನೂ ಇಲ್ಲ ರಮೇಶ್. ನಿನಗೆ ಬರುವ ವಿದ್ಯೆಯನ್ನು ಅವನು ಪೂರ್ಣವಾಗಿ ಕಲಿಯಲಿ. ಅನಂತರ ತನ್ನ ಮಾರ್ಗದ ಅರಿವು ತನಗೇ ಆಗುವುದು. ಅವನು ನನಗೆಷ್ಟು ಪ್ರಿಯನೋ ನಿನಗೂ ಅಷ್ಟೇ ಪ್ರಿಯನಾಗಿದ್ದಾನೆ. ಅವನ ಪ್ರಗತಿ ಎಲ್ಲಿ ಎಳೆದೊಯ್ಯುತ್ತದೆಯೋ ಅಲ್ಲಿಗೆ ಹೋಗಲಿ. ಆದರೆ ಅಲ್ಲಿಗೆ ಹೋಗುವ ಮುನ್ನ ಹಿಂದು ಮುಂದು ನೋಡಿ ಹೋಗಲಿ."

"ಸರಿಯಾದ ಮಾತು" ಎಂದಿಬ್ಬರೂ ಎದ್ದರು. ಆ ವೇಳೆಗೆ ಪಿಳ್ಳೆಪ್ಪ ಮಂಗಳ ಮುಗಿಸಿ ಶ್ರೀರಾಗದ ಮುಕ್ತಾಯದಲ್ಲಿದ್ದ. ರಮೇಶ ನಗುತ್ತಾ

"ನಮ್ಮ ಮಾತೂ ಇವತ್ತು ಶ್ರೀರಾಗದಲ್ಲಿಯೇ ಮುಗಿಯಿತಲ್ಲವೇ ಮೂರ್ತಿ" ಎಂದ. ಅದಕ್ಕೆ ಮೂರ್ತಿ ನಗುತ್ತಾ

"ಹೌದು. ಆದರೆ ಕಲ್ಯಾಣಿಯಿಂದ ಆರಂಭವಾಗಲಿಲ್ಲ. ನೀಲಾಂಬರಿಯಿಂದ ಆರಂಭವಾಯಿತಷ್ಟೇ" ಎಂದು ನುಡಿದ. ಇವರಿಬ್ಬರ ಮಾತುಕತೆಗಳನ್ನು ಮೋಡದ ಮುಸುಕಿನಲ್ಲಿ ಕುಳಿತು, ಗಂಡನ ಮಾತನ್ನು ಹೊಂಚು ಕೇಳುವ ಸವತಿಯಂತೆ ಕೇಳುತ್ತಿದ್ದ ಚಂದ್ರನು ತಾನೂ ಮೆಲ್ಲನೆ ಹೊರಗೆ ಬಂದು ಕಿಲಕಿಲನೆ ನಗುತ್ತಾ ಜಗತ್ತನ್ನೇ ತನ್ನ ನಗುವಿನ ಜಾಲದಲ್ಲಿ ಸೆರೆಹಿಡಿಯಲು ಯತ್ನಿಸಲಾರಂಭಿಸಿದ.

೫

'ಕಲಾಭವನ'ದ ವ್ಯವಸ್ಥಾಪಕರು ಕೂಡಿಸಿದ 'ಚಿತ್ರಕಲಾ ಪ್ರದರ್ಶನ' ಬಹಳ ಯಶಸ್ವಿಯಾಗುವ ಸುಚಿನ್ಹೆಗಳು ಕಾಣುತ್ತಿದ್ದವು. ಜಗತ್ಪ್ರಸಿದ್ಧರಾದ ಅನೇಕ ವಂಗೀಯ ಚಿತ್ರಕಾರರ ಕೃತಿಗಳಾಗಲೇ ಬಂದಿದ್ದವು. ಪಂಜಾಬಿನ, ಮುಂಬಯಿಯ, ಮದರಾಸಿನ, ಮೈಸೂರಿನ ಸಂಪ್ರದಾಯಗಳನ್ನು ತೋರುವ ಅನೇಕ ಚಿತ್ರಗಳ ನಿರೀಕ್ಷಣೆಯೂ ಇದ್ದಿತು. ಕಾರ್ಯನಿರ್ವಾಹಕಮಂಡಲಿಯ ಸದಸ್ಯರಲ್ಲಿ ಒಬ್ಬರಾಗಿದ್ದ ಮುಕುಂದ ರಾಯರನ್ನು ಒಂದು ದೊಡ್ಡ ಆಸೆ ಆವರಿಸಿತು. ಬಂಗಾಳ ಹೇಗೆ ತನ್ನದೇ ಆದ ಒಂದು ಸಂಪ್ರದಾಯವನ್ನು ಸ್ಥಾಪಿಸಿಕೊಂಡು ಜಗತ್ತಿನ ದೃಷ್ಟಿಯನ್ನು ಸೆಳೆದಿದೆಯೋ ಹಾಗೆ ಕರ್ನಾಟಕ ತನ್ನ ವೈಶಿಷ್ಟ್ಯವನ್ನು ಸಾರುವ ಒಂದು ಸಂಪ್ರದಾಯವನ್ನು ಆರಂಭಿಸಬೇಕೆಂದೂ ಅದಕ್ಕೆ ಈ ಪ್ರದರ್ಶನ ಅಸ್ತಿಭಾರ ಹಾಕಬೇಕೆಂಬುದೇ ಅವರ ಆಸೆಯ ರೂಪ. ಈ ಆಸೆಗೆ ಇಂಬು ಗೊಡುವಂತೆ ವೆಂಕಟಪ್ಪನವರ 'ಅರ್ಧನಾರೀಶ್ವರ,' 'ಮೃಗತೃಷ್ಣಾ,' 'ವೀಣೆಯ ಹುಚ್ಚು' ಮತ್ತು 'ಊಟಿಯ ನೈಸರ್ಗಿಕ ನೋಟ'ಗಳೇ ಮೊದಲಾದ ಚಿತ್ರಗಳೂ, ಎಲವಟ್ಟಿ, ಟಂಕಸಾಲಿ, ಕಮಡೋಳಿಯವರ ಪ್ರಕೃತಿ ದೃಶ್ಯಗಳೂ, ಮಿಣಜಿಗಿ, ಬಡಿಗೇರ, ರಮೇಶ ಮೊದಲಾದವರ ಸಹಜ ಮತ್ತು ಆದರ್ಶಚಿತ್ರಗಳೂ ಬಂದಿದ್ದವು. ಮಾಣಿಯ 'ಸಂದೇಶ' ಹೇಗಾದರೂ ಆ ಪ್ರದರ್ಶನಕ್ಕೆ ಬರಲೇಬೇಕೆಂಬುದು ಮುಕುಂದರಾಯರ ಮತ್ತು ರಮೇಶನ ಹಟ. ಈಗಲೇ ಏನು ಅವಸರ ಎಂದು ಮೂರ್ತಿ ಮತ್ತು ಮಾಣಿಯ ವಿರೋಧ. ಆ ಪ್ರದರ್ಶನಕ್ಕೆ ಬರುವ ಚಿತ್ರಗಳ ಪಟ್ಟಿಯನ್ನು ನೋಡಿಯೇ ಮಾಣಿಯ ಸ್ಥೈರ್ಯ ತಪ್ಪಿಹೋಗಿತ್ತು. ಅಂತಹ ಉತ್ತಮ ಕಲಾಕೂಟವನ್ನು ತನ್ನ ಮಸಿಯ ಕಣ ಕೆಡಿಸಬಾರದೆಂದು ನಿರ್ಧರಿಸಿಕೊಂಡ. ಆದರೆ ಮುಕುಂದ ರಾಯರ ಹಟ – ಆಗ್ರಹ – ಅವನ ನಿರ್ಧಾರವನ್ನು ಗೆದ್ದಿತು.

* * * *

ಭಾನುವಾರ ಬೆಳಿಗ್ಗೆ 'ಕಲಾಭವನ'ದ ಮುಂದೆ ಮಹೋತ್ಸಾಹ. ತಳಿರು ತೋರಣಗಳ ಅಲಂಕಾರ, ಸುಮಧುರ ನಾಗಸ್ವರದ ನಿನಾದ, ಉತ್ಸವ ಭಾಗಿಗಳ ಆನಂದ – ಇವು ಎಲ್ಲವುಗಳ ಕೋಲಾಹಲ. ದಿವಾನ

ಸಾಹೇಬರೇ ಆರಂಭೋತ್ಸವವನ್ನು ನೆರವೇರಿಸುವುದಾಗಿ ಮೊದಲೇ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುದರಿಂದ ಸಾವಿರಾರು ಜನ ಸಭಾಮಂದಿರ ಕಿಕ್ಕಿರುವಂತೆ ನೆರೆದು ಬಿಟ್ಟಿದ್ದರು. ಜತೆಗೆ ಪ್ರಸಿದ್ಧ ವಂಗೀಯ ಚಿತ್ರಕಾರರೂ, ವಿಮರ್ಶಕರೂ ಆದ ಒಲೀಂದ್ರಕುಮಾರ ಗಂಗೂಲಿಯವರ ಪ್ರಧಾನ ಭಾಷಣ. ಉತ್ಸವ ಶ್ರೀಮತಿ ರತ್ನಮ್ಮನ ಗಾಯನದಿಂದ ಆರಂಭವಾಯಿತು. ಗಾಯಕಿಯ ಸುಸ್ವರವೂ, ರಾಗರಸ ಮಾಧುರ್ಯವೂ ಸಭೆಯಲ್ಲಿ ಕಲಾಪ್ರಭೆಯನ್ನು ಬೀರಿತು. ಸ್ವಾಗತಾಧ್ಯಕ್ಷರಾದ ಮುಕುಂದರಾಯರ ಸ್ವಾಗತಭಾಷಣವಾದ ಮೇಲೆ ಅಧ್ಯಕ್ಷರು ಜೀವನದಲ್ಲಿ ಲಲಿತಕಲೆಗಳಿಗಿರುವ ಸ್ಥಾನವನ್ನು ನಿರ್ದೇಶಿಸಿ, ಉತ್ತಮ ಭಾಷಣಮಾಡಿ ಸಭಾಸದರನ್ನು ಜಾಗೃತಗೊಳಿಸಿದರು. ಅನಂತರ ಗಂಗೂಲಿಯವರು ಭಾರತೀಯ ಲಲಿತಕಲೆಗಳ ಬೆಳವಳಿಗೆಯನ್ನು ಸಾಂಸ್ಕೃತಿಕ ದೃಷ್ಟಿಯಿಂದ ವಿವೇಚಿಸುತ್ತಾ ವಿವಿಧ ಸಂಪ್ರದಾಯಗಳ ಕೃತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ, ಅವುಗಳನ್ನು ಸರಿಯಾದ ರೀತಿಯಲ್ಲಿ ನೋಡುವ ಬಗೆಯನ್ನು ತಿಳುಹುತ್ತಾ

"ವೆಂಕಟಪ್ಪನವರಂತಹ ಕಲಾವಿದರಿಗೆ ಜನನವಿತ್ತಿರುವ ಈ ನಾಡಿಗೆ ನಾನು ಲಲಿತಕಲಾಭಿರುಚಿಯನ್ನು ಬೋಧಿಸಬೇಕಾಗಿಲ್ಲ. ಆದರೆ ಅಂತಹ ಮಾನ್ಯರನ್ನು ನಮ್ಮವರೆಂದು ನಾವು ಹೇಳಿಕೊಳ್ಳಲು ತಕ್ಕ ಅಭಿರುಚಿಯನ್ನು ಜೀವನದ ಎಲ್ಲ ಸನ್ನಿವೇಶಗಳಲ್ಲಿಯೂ ಹೊರೆಗೆಡಹುತ್ತಾ ಬರಬೇಕು. ಜನತೆಯ ಕಣ್ಣುಗಳಿಗೆ ಬೀಳಲು ಹೆದರಿಹೆದರಿ ಹಿಂದೆ ಕುಳಿತಿರುವ ಹಿರಿಯ-ಕಿರಿಯ ಕಲಾವಿದರನ್ನು ಬೆಳಕಿಗೆ ತಂದು ಪ್ರೋತ್ಸಾಹಿಸಬೇಕು. ಉದಾಹರಣೆಗೆ ಇಂದಿನ ಪ್ರದರ್ಶನದಲ್ಲಿ 'ಸಂದೇಶ'ವೆಂಬ ಚಿತ್ರವೊಂದನ್ನು ನೀವು ನೋಡುವಿರಿ. ಅದನ್ನು ಬರೆದವನು ವಯಸ್ಸಿನಲ್ಲಿ ಬಹಳ ಚಿಕ್ಕವನೆಂದು ವ್ಯವಸ್ಥಾಪಕರು ನನಗೆ ತಿಳಿಸಿದರು. ಆ ಚಿಕ್ಕವನ ಕೃತಿ ವಯಸ್ಸಿನ ಎಲ್ಲೆಯನ್ನು ಮೀರಿದೆ. ಅಕ್ಷರವಾದುದರ ಸಾಕ್ಷಾತ್ಕಾರ ಕೇವಲ ವಯೋವೃದ್ಧರ ಸ್ವತ್ತಲ್ಲ ಎಂಬುದನ್ನು ಸಿದ್ಧಮಾಡಿ ಕೊಟ್ಟಿದೆ.

'ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ'

ಎಂಬ ಉಪನಿಷದ್ವಾಕ್ಯದ ದೃಷ್ಟಾಂತವೇ ಆ ಚಿತ್ರ. ಗಹನವಾದ ಇಂತಹ ತತ್ವವನ್ನು ಚಿತ್ರಕಲೆಯ ಮೂಲಕ ಸಾರುವುದು ಹಿರಿಗೆಲಸ, ಸಾರುವವರು ಹಿರಿ ಶಕ್ತಿಯುಳ್ಳವರು. ಅಂತಹ ಹಿರಿಶಕ್ತಿಯುಳ್ಳವರು ನಿಮ್ಮಲ್ಲಿ ಅನೇಕ ರಿದ್ದಾರೆಂದು ನಾನು ಹೆಮ್ಮೆಯಿಂದ ಹೇಳುತ್ತಿದ್ದೇನೆ" ಎಂದು ಹೇಳಿ ಸಭೆಯ ಪ್ರಚಂಡ ಕರತಾಡನ ಮಧ್ಯೆ ವಿರಮಿಸಿದರು. ಸಭೆಗೆ ಸಭೆಯೇ 'ಸಂದೇಶ'ವನ್ನು ಮತ್ತೆಮತ್ತೆ ನೋಡಿ ಮೆಚ್ಚಿತು. ಪ್ರದರ್ಶನ ನಡೆದ ಎಂಟು ದಿವಸವೂ ಊರಿಗೆ ಊರೇ ಹೋಗಿಬಂದಿತು. ಎಲ್ಲರೂ ಅದರ ವಿಚಾರ ಮಾತ ನಾಡುವವರೇ – ಎಲ್ಲರೂ ಅದರಲ್ಲಿ ಗಹನ ವೇದಾಂತ ತತ್ತ್ವಗಳನ್ನು ಹುಡುಕುವವರೇ ಆದರು. ಎಲ್ಲ ವೃತ್ತಪತ್ರಿಕೆಗಳಲ್ಲಿಯೂ 'ಸಂದೇಶ'ದ ಬಗ್ಗೆ ಉದ್ದುದ್ದ ಲೇಖನಗಳು. ಎಲ್ಲರೂ ಹೊಗಳುವವರೇ – ಒಬ್ಬರು ಒಂದು ರೀತಿ; ಮತ್ತೊಬ್ಬರು ಮತ್ತೊಂದು ರೀತಿ.

ಮಾಣಿಗೆ ಈ ರಹಸ್ಯ ಬಗೆಹರಿಯಲಿಲ್ಲ. ಒಂದು ದಿನ ಎಲ್ಲ ವೃತ್ತ ಪತ್ರಿಕೆಗಳ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಂಡು ಅವುಗಳನ್ನು ಮೂರ್ತಿಯ ಮುಂದಿಟ್ಟ. ಮೂರ್ತಿ ಅಭಿಪ್ರಾಯಗಳನ್ನು ಓದಿ ನಕ್ಕು ಮಾತನಾಡದೆ ಮಾಣಿಯ ಕೈಗೆ ಹಿಂದಕ್ಕೆ ಕೊಟ್ಟ. ಒಂದು ಬಗೆಯ ದೈನ್ಯದಿಂದ ಮಾಣಿ

"ಇವುಗಳನ್ನು ನೋಡಿ ನಿಮಗೇನನಿಸುತ್ತದೆ ಸಾರ್?"

"ನಿನಗೇನನಿಸುತ್ತದೆ ಮಾಣಿ?"

"ನನಗೇನೂ ಅನ್ನಿಸುವುದಿಲ್ಲ ಸಾರ್, ನಾನು ಆ ಚಿತ್ರದ ವಿಚಾರ ಆಲೋಚಿಸದೆ ಇದ್ದುದನ್ನೆಲ್ಲಾ ಈ ಪತ್ರಿಕೆಗಳವರು ಬರೆದಿದ್ದಾರೆ."

"ಅದೇ ಪತ್ರಿಕೆಗಳ ವಿಶೇಷ ಮಾಣಿ. ನಿನ್ನ ಚಿತ್ರವನ್ನು ನಿಜವಾ ಗಿಯೂ ಅರ್ಥಮಾಡಿಕೊಂಡು ಮೆಚ್ಚಿ ಪತ್ರಿಕೆಗಳವರು ಹಾಗೆ ಬರೆದಿದ್ದಾರೆಂದು ಭಾವಿಸಿದೆಯೇನು?"

ಹಾಗಾದರೆ.... ಸಾರ್....?"

"ಗಂಗೂಲಿಯವರು ದೊಡ್ಡವರು. ಅವರು ಹೇಳಿದ ಪಲ್ಲವಿಯನ್ನು ಇವರೂ ಹಾಡಬೇಕು. ಅವರ ಕೃಪಾದೃಷ್ಟಿ ನಿನ್ನ ಚಿತ್ರದ ಮೇಲೆ ಬೀಳ ದಿದ್ದರೆ ಈ ಪತ್ರಿಕೆಗಳವರು ಅದರ ಸುದ್ದಿಯನ್ನೂ ಎತ್ತುತ್ತಿರಲಿಲ್ಲ."

“ಹಾಗೇ ಸಾರ್. ನನಗದು ಗೊತ್ತಿರಲಿಲ್ಲ. ಇವೆರಲ್ಲರೂ ನಿಜವಾಗಿಯೂ ‘ಸಂದೇಶ’ವನ್ನು ಮೆಚ್ಚುತ್ತಿದ್ದಾರೆಂದು ಭಾವಿಸಿದೆ.”

“ನಾನು ಒಂದು ಮಾತು ಹೇಳತಕ್ಕದ್ದಿದೆ. ಹೇಳಲೆ ಮಾಣಿ? ನೀನು ಮನಸ್ಸಿಗೆ ಏನೂ ತಿಳಿದುಕೊಳ್ಳದಿದ್ದರೆ ಹೇಳುತ್ತೇನಪ್ಪಾ.”

“ಹೇಳಿ ಸಾರ್, ತಾವಲ್ಲದೆ ಇನ್ನು ಯಾರು ಹೇಳಬೇಕು ನನಗೆ.”

“ನೀನು ಹೂವು ಅರಳುವುದನ್ನು ನೋಡಿರುವೆಯಲ್ಲವೆ?”

“ನೋಡಿದ್ದೇನೆ ಸಾರ್.”

“ಹಕ್ಕಿ ಹಾಡುವುದನ್ನು ಕೇಳಿರುವೆಯಲ್ಲವೆ?”

“ಕೇಳಿದ್ದೇನೆ ಸಾರ್.”

“ಹೂವು....ಹಕ್ಕಿ....ಇವು ಎರಡೂ ಯಾರನ್ನಾದರೂ ಮೆಚ್ಚಿಸಲು ತಮ್ಮ ಕಾರ್ಯಗಳನ್ನು ನೆರವೇರಿಸುತ್ತವೆಯೆಂದು ಭಾವಿಸಿರುವೆಯಾ? ನಾಳೆ ನೀನೂ- ನಾನೂ - ಇಡೀ ಜಗತ್ತೂ ಒಂದು ಮಲ್ಲಿಗೆಯ ಬಳಿ ನಿಂತು, ‘ನೀನು ಚೆನ್ನಾಗಿಲ್ಲ. ನೀನು ತಾವರೆಯಷ್ಟು ದೊಡ್ಡದಾಗಿರಬೇಕಾಗಿತ್ತು; ಸಂಪಿಗೆಯಷ್ಟು ಸೌಗಂಧವನ್ನು ಪಡೆಯಬೇಕಾಗಿತ್ತು’ ಎಂದು ವಿಮರ್ಶಿಸಿದರೆ ಅದು ಅರಳಿ ತನ್ನ ಸೌಗಂಧ ಬೀರುವುದನ್ನು ನಿಲ್ಲಿಸುವುದೇನು? ಅಥವಾ ‘ನಿನ್ನ ಸಮಾನವಿಲ್ಲ, ನಿನ್ನ ಮುಂದೆ ಜಾಜಿ, ಗುಲಾಬಿ, ಸುರಗಿ, ಪಾದರಿಗಳು ಸೂರ್ಯನ ಮುಂದೆ ಹಣತೆಯಿದ್ದ ಹಾಗೆ’ ಎಂದು ಹೊಗಳಿದರೆ, ಅದು ಹಿಗ್ಗಿ ಹಿಗ್ಗಿ ತನ್ನ ರೂಪ, ಗುಣಗಳನ್ನು ಬದಲಾಯಿಸುವುದೇನು? ಹಾಗೆಯೇ ನೀನೂ ಲೋಕದ ನುಡಿಗೆ ದೂರನಾಗಿರಬೇಕು. ಲೋಕದ ನೀತಿ ನಿಂದೆಗಳೆರಡೂ ಒಂದೆಂದು ಭಾವಿಸಿ ಹಿಗ್ಗು ಕುಗ್ಗುಗಳ ವಿಲೋಭನೆಗೆ ನಿಲುಕದಿರಬೇಕು. ಹೂವಿನಂತೆ ವಿಕಸಿಸುತ್ತಾ, ಹಕ್ಕಿಯಂತೆ ಹಾಡುತ್ತಾ, ನಿನ್ನ ಕಲಾತಪಸ್ಸನ್ನು ಸಾಧಿಸಿಕೊಂಡು ಹೋಗಬೇಕು. ಆಗಲೇ ನೀನು ನಂದಾಲಾಲ, ಪ್ರಮೋದಕುಮಾರ, ಕ್ಷಿತೀಂದ್ರ ಮುಜಂದಾರ ಮುಂತಾದವರ ಪಂಕ್ತಿಗೆ ಸೇರುವೆ.”

ಮೂರ್ತಿಯ ಮುಖದಲ್ಲಿ ವಿರಾಜಮಾನವಾಗಿದ್ದ ತೇಜಸ್ಸು ಕಣ್ಣುಗಳಲ್ಲಿ ಕಾರುತ್ತಿದ್ದ ಕಿಡಿಗಳನ್ನು ದಿಟ್ಟಿಸಿ ಮಾಣಿ ನೋಡಲಾರದಾದ. ತನ್ನ ಕಣ್ಣುಗಳಲ್ಲಿ ಧಾರೆಧಾರೆಯಾಗಿ ಸುರಿಯುತ್ತಿದ್ದ ಜಲದಿಂದ

ಮೂರ್ತಿಯ ಪಾದಗಳನ್ನು ತೊಳೆದ. ತನ್ನ ಪಾದದ ಬಳಿ ಬಿದ್ದ ಮಾಣಿಯನ್ನು ಹಿಡಿದೆತ್ತಿ ಅಪ್ಪಿ ಮೂರ್ತಿ ಮೃದುವಾಗಿ

"ಮಾಣಿ. ಕಲೆ ನಿಜವಾಗಿಯೂ ಒಂದು ತಪಸ್ಸು. ಉತ್ತಮ ಕೃತಿಗೆ ಉತ್ತಮ ಅಂತಃಕರಣ, ಉತ್ತಮ ಜೀವನ ಎರಡೂ ಬೇಕು. ಇವೆರಡನ್ನೂ ಹೊಂದುವ ಶಕ್ತಿ ನಿನಗೆ ದೊರೆಯಲಿ" ಎಂದು ಹರಸಿದ.

ಅಂದಿನಿಂದ ಮಾಣಿಯ ಜೀವನ ಒಂದು ಹೊಸ ರೂಪವನ್ನು ತಾಳಿತು. ಇದುವರೆಗೆ ಎತ್ತೆತ್ತಲೋ ಹಾರಾಡುತ್ತಿದ್ದ ಅವನ ಮನಸ್ಸಿಗೆ ನಿರ್ದಿಷ್ಟವಾದ ಒಂದು ಆಸರೆ ಸಿಕ್ಕಿದಂತಾಯಿತು. ಕೆಲಸದಲ್ಲಿ ವಿಶೇಷವಾದ ಉತ್ಸಾಹ, ಲವಲವಿಕೆ. ಒಮ್ಮೆ ಒಂದು ವಸ್ತುವನ್ನು ಚಿತ್ರಿಸಲು ಬೇಸರಗೊಳ್ಳುತ್ತಿದ್ದವನು ಈಗ ಅದನ್ನೇ ತಿದ್ದಿ ತಿದ್ದಿ ನಾಲ್ಕಾರು ಬಾರಿ ಚಿತ್ರಿಸಲೂ ಬೇಸರಗೊಳ್ಳುತ್ತಿರಲಿಲ್ಲ. ಗೊತ್ತಾದ ವೇಳೆಯಲ್ಲಿ 'ಕಲಾಭ್ಯಾಸ'ವನ್ನು ಮಾಡುವುದೆಂದು ತಿಳಿದುಕೊಂಡಿದ್ದ ಮಾಣಿಗೆ ಕಲಾಭ್ಯಾಸಕ್ಕೆ ವೇಳೆಯೇ ಇಲ್ಲವೆಂಬ ಪರಿಜ್ಞಾನ ಬಂದಿತು. ನಿಂತರೆ, ಕುಳಿತರೆ, ಮಲಗಿದರೆ ಅದೇ ಜ್ಞಾನ, ಅದೇ ಧ್ಯಾನ. ತಾನು ಸಾಧಿಸುತ್ತ ಮುಂದೆ ಮುಂದೆ ಹೋದ ಹಾಗೆಲ್ಲಾ ಎಂತಹ ವಿಶಾಲವಾದ, ಮೇರೆವರಿಯದ ಜಗತ್ತಿಗೆ ಬಂದಿರುವೆ ಎಂಬುದರ ಅರಿವಾಗುತ್ತ ಬಂದಿತು. ತನ್ನ ಮುಂದಿರುವ ವಿಸ್ತಾರ ಪ್ರಪಂಚವನ್ನು ನೋಡಿ ಒಮ್ಮೊಮ್ಮೆ ಹತಾಶನಾಗುವನು. 'ಅಲೆಕ್ಸಾಂಡರ್, ನೆಪೋಲಿಯನ್, ಅಶೋಕರಂತಹ ವೀರಾಧಿವೀರರೇ ಕ್ಷುಲ್ಲಕವಾದ ಜಗತ್ತಿನ ಒಂದು ಭಾಗವನ್ನೂ ಗೆಲ್ಲಲಾಗಲಿಲ್ಲ? ಇನ್ನು ನಾನು ಭಾವಸಾಮ್ರಾಜ್ಯವನ್ನು ಗೆಲ್ಲುವುದೆಂದರೇನು ?' ಎಂದು ನಿರ್ವಿಣ್ಣನಾಗುವನು. ಆದರೆ ಮರುಕ್ಷಣವೇ ಸಿಡಿಲಿನಂತಹ ಪ್ರಚಂಡ ಅಮೋಘವಾಣಿ : 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ.' ಮುಂದುಮುಂದಕ್ಕೆ ಹೋಗುತ್ತಿರುವವನಿಗೆ ಹಿಂದೆ ನಡೆಯುವುದರ ಚಿಂತೆಯೇತಕ್ಕೆ ? ಅದರಲ್ಲಿ ವೃಥಾ ಹೊತ್ತನ್ನೇತಕ್ಕೆ ಕಳೆಯುವೆ ?'—ಎಂಬ ವೀರ ಸಂದೇಶ. 'ಸಂದೇಶ' ವನ್ನು ಚಿತ್ರದ ಮೂಲಕ ನಿರೀಕ್ಷಿಸಿದ್ದವನು ಈಗ ಅನುಭವಿಸಲಾರಂಭಿಸಿದ. ತನ್ನ ಮಗುವಿಂದ ತಾನೇ ಪಾಠಹೇಳಿಕೊಳ್ಳಬೇಕಾಯಿತಲ್ಲಾ ಎಂದು ಆಶ್ಚರ್ಯಪಡುವಂತಾಯಿತು.

ಮೊದಲಿಗಿಂತ ಈಗ ಕುಂಚ ಸರಾಗವಾಗಿ ಓಡುತ್ತಿತ್ತು. ಭಾವಗಳ ಹೊಡೆತ ಕುಂಚಕ್ಕೂ ವಿಶೇಷವಾದ ಶಕ್ತಿಯೊಂದನ್ನು ಇತ್ತಿದ್ದಿತು. ಆದರೆ ಒಮ್ಮೊಮ್ಮೆ ಕೈ ನಿಂತು ಹೋಗುತ್ತಿತ್ತು. ಪ್ರೇಮಭರದಿಂದ ತನ್ನ ಮಗುವನ್ನು ನಿರೀಕ್ಷಿಸುವ ತಾಯಿಯ ಕಣ್ಣುಗಳಲ್ಲಿ ಪ್ರೇಮದ ಬದಲು ಕಾಠಿಣ್ಯವೋ, ಆಲಸ್ಯವೋ ವ್ಯಕ್ತವಾಗಿಬಿಡುತ್ತಿತ್ತು. ತಾನು ಚಿತ್ರಿಸುತ್ತಿದ್ದ ಪ್ರಕೃತಿಯ ನೋಟಗಳು ಚಲಿಸದೆ ನಿಂತ ಮರಗಿಡಗಳ ಶವಗಳಂತಾಗಿ ಬಿಡುತ್ತಿದ್ದವು. ಅವುಗಳನ್ನು ಸರಿಪಡಿಸುವುದರಲ್ಲಿ ಗಂಟೆಗಂಟೆಗಳು – ದಿವಸ ದಿವಸಗಳು ಕಳೆದುಹೋಗುತ್ತಿದ್ದವು.

ರೂಪ – ರೇಖೆ – ಬಣ್ಣ ಮುಂತಾದ ವಿಷಯಗಳಲ್ಲಿದ್ದ ಕುಂದುಕೊರತೆ ಗಳನ್ನು ರಮೇಶ ಆಗಾಗ್ಗೆ ಸರಿಪಡಿಸಿಕೊಡುತ್ತಿದ್ದನೇ ವಿನಾ, ಮಾಣಿಯ ಸಮಸ್ಯೆಗಳನ್ನು ಪರಿಹರಿಸಲು ಅಸಮರ್ಥನಾಗಿದ್ದ. ಮಾಣಿಗೆ ಇದೂ ಒಂದು ದೊಡ್ಡ ದುಃಖ. ‘ಯಾರನ್ನು ತಾನು ನಿರ್ವಂಚನೆಯಿಂದ ಗುರು ವೆಂದು ಒಪ್ಪಿಕೊಂಡನೋ ಆತನಿಗೆ ತಾನೇ ಗುರುವಾಗುವ ಸನ್ನಿವೇಶ ಒದಗಿತಲ್ಲಾ....ತನ್ನನ್ನು ಮುಂದಕ್ಕೆ ಒಯ್ಯುವವರಾರು ? ಬೇರೆ ದಡವನ್ನು ತೋರುವವರು ಯಾರು ? ಮನಸ್ಸಿನ ಈ ಸಮಸ್ಯೆಗಳನ್ನು ಪರಿಹರಿಸಿ ಶುಭ್ರ ಕಲಾಕಾಶದ ದರ್ಶನವನ್ನು ಮಾಡಿಸುವ ಮಹಿಮಾಶಾಲಿಯಾದ ಗುರುವರ ನಾರು ?’ ಎಂದು ಚಿಂತಿಸತೊಡಗಿದ. ಭಿಕ್ಷಕ್ಕೆ ಬಂದಿದ್ದ ಒಬ್ಬ ತಿರುಕ

“ವಂದನಂ ಗುರುವೀರನೇ—ನಿನಗೊಂದನಂ ಗುರುವೀರನೇ |
ಬಂಧ ಮೋಕ್ಷಗಳೆಂಬ ಎರಡರ ಸಂದು ತೋರಿದ ಧೀರನೇ ||”

ಎಂದು ಹಾಡಿದುದು ನೆನಪಾಯಿತು. ಅದನ್ನೇ ಮತ್ತೆ ಮತ್ತೆ ಕುರುಕುತ್ತಾ ‘ನನ್ನನ್ನುದ್ಧರಿಸುವ ಅಂತಹ ಗುರು ಯಾರು ?’ ಎಂದು ಆರ್ತನಾಗಿ ಮಾಣಿ ಮೊರೆಯಿಡಲಾರಂಭಿಸಿದ. ತನ್ನ ಕೆಲಸವೊಂದನ್ನುಳಿದು ಬೇರೆ ಯಾವುದರಲ್ಲಿಯೂ ಮನಸ್ಸು ಓಡದು. ಇಡೀ ಜಗತ್ತಿನಲ್ಲಿ ಮಾಣಿಗೆ ಸತ್ಯವಾಗಿ ಕಾಣಬರುತ್ತಿದ್ದುದು ತನ್ನ ಕಲೆ—ತನ್ನ ಸಾಧನ ; ಮಿಕ್ಕೆಲ್ಲವೂ ಅಸತ್ಯ, ಅಸ್ಥಿರ, ಕ್ಷರ. ತನ್ನಲ್ಲಿಯೇ ಅಡಗಿಸಿಕೊಳ್ಳಲಾರದ ವ್ಯಥೆ ಒಂದೆಡೆಯಲ್ಲಿ, ಬೇರೆ ಯಾರಲ್ಲಿಯೂ ಬಿಚ್ಚಿ ಹೇಳಲಾಗದ ಅಸಹಾಯಕತೆ

ಮತ್ತೊಂದೆಡೆಯಲ್ಲಿ—ಹೀಗೆ ಅವನ ಮನಸ್ಸು ತಲ್ಲಣಗೊಳ್ಳಲಾರಂಭಿಸಿತು.

ಪ್ರದರ್ಶನ ಮುಗಿದು ಎರಡು ವಾರಗಳಾಗುತ್ತ ಬಂದಿತ್ತು. ಒಂದು ದಿವಸ ಎಂದಿನಂತೆ ಮಾಣಿ ರಮೇಶನ ಕಲಾಶಾಲೆಯಲ್ಲಿ ಅಭ್ಯಸಿಸುತ್ತಾ ಕುಳಿತಿದ್ದಾನೆ. ಮುಕುಂದರಾಯರು ತಮ್ಮ ಸಹಜವಾದ ಸರಳವಾದ ನಗುಮೊಗದಿಂದ ದಪ್ಪಪುಸ್ತಕಗಳ ಒಂದು ಗಂಟನ್ನು ಹೊತ್ತು ಅಲ್ಲಿಗೆ ಬಂದರು. ರಮೇಶ ಮಾಣಿ ಅವರಿಗೆ ಸ್ವಾಗತ ಬಯಸಿ ಜತೆಯಲ್ಲಿ ಮಾತನಾಡುತ್ತ ಕುಳಿತರು. ರಾಯರು ನಗುನಗುತ್ತಾ ಮಾಣಿಯ ಕೈಗೆ ತಾವು ತಂದಿದ್ದ ಗಂಟನ್ನಿತ್ತು ಅವನ ಮುಖವನ್ನೇ ಪರೀಕ್ಷಿಸುತ್ತ ಕುಳಿತರು. ಇದರ ಅರ್ಥ ಮಾಣಿಗೆ ಮೊದಲು ಆಗಲಿಲ್ಲ. ವಿಳಾಸ ಮುಕುಂದರಾಯರ ಹೆಸರಿಗಿತ್ತು. ಆಶ್ಚರ್ಯಚಕಿತನಾಗಿ

"ಇದು ತಮ್ಮದು ಸಾರ್."

"ಒಡೆದು ನೋಡು ಮಾಣಿ. ಯಾರದೆಂಬುದು ನಿನಗೇ ಗೊತ್ತಾಗುತ್ತದೆ."

ಮಾಣಿ ಆತುರದಿಂದ ಒಡೆದು ಅದರಲ್ಲಿದ್ದ ಗ್ರಂಥಗಳನ್ನು ಒಂದೊಂದನ್ನಾಗಿ ನೋಡಲಾರಂಭಿಸಿದ. ಕಲಾವಿದ ಅಬ್ದುರ್ ರಹಮಾನ್ ಚುಗ್ತಾಯಿಯ 'ಮರೀಖಿ ಚುಗ್ತಾಯಿ' ಚಿತ್ರಸಂಗ್ರಹ, ಆನಂದ ಕುಮಾರಸ್ವಾಮಿಯವರ 'ರಜಪೂತ ಚಿತ್ರಕಲೆ' ಚಿತ್ರಸಂಗ್ರಹ ಚಟರ್ಜಿಯವರ ೧೭ ಸಂಪುಟಗಳ ಚಿತ್ರಸಂಗ್ರಹಗಳು, ಬ್ರಿಟಿಷ್ ಮ್ಯುಸಿಯಮ್ಮಿನವರು ಪ್ರಸಿದ್ಧಿಸಿರುವ ಅಜಂತಾ, ರಜಪೂತ, ಮುಘಲ್ ಸಂಪ್ರದಾಯದ ಚಿತ್ರಸಂಗ್ರಹಗಳು, ಗಂಗೂಲಿಯವರಿಂದ ವಿರಚಿತವಾದ ಎರಡು ಗ್ರಂಥಗಳು—ಈ ಅಪೂರ್ವನಿಧಿಯನ್ನು ತನಗೆ ಕಳುಹಿಸಿದ ಮಹನೀಯನನ್ನು ತೆರೆದ ಹೃದಯದಿಂದ ವಂದಿಸಿದ. ಚುಗ್ತಾಯಿ ಗ್ರಂಥವನ್ನು ತೆರೆದು ಮೊದಲನೆಯ ಪುಟವನ್ನು ನೋಡಲು ಅದರಲ್ಲಿ, 'ನನ್ನ ಹೃದಯಕೊಪ್ಪಿದ 'ಸಂದೇಶ' ಚಿತ್ರಶಿಲ್ಪಿಗೆ—ಪ್ರೇಮದ ಕಾಣಿಕೆ. ಒ.ಸಿ. ಗಂಗೂಲಿ' ಎಂದು ಬರೆದಿರಲು ಮಾಣಿಯ ಸಮಸ್ಯೆ ಪರಿಹಾರವಾದ ಹಾಗಾಯಿತು. ರಾಯರ ಕಡೆ ತಿರುಗಿ

"ಗಂಗೂಲಿಯವರದು ಎಷ್ಟು ದೊಡ್ಡ ಹೃದಯ ಸಾರ್. ನನ್ನಂತಹ ಒಂದು ಸಣ್ಣ ಕ್ರಿಮಿಯನ್ನೂ ಎಷ್ಟು ದೊಡ್ಡದಾಗಿ ಭಾವಿಸುತ್ತಾರೆ. ಈ ಅಪೂರ್ವ ನಿಧಿಯ ದಾನಕ್ಕೆ ಅವರಿಗೆ ನಾನೇನು ಪ್ರತಿಯಾಗಿ ಕೊಡಬಲ್ಲೆ?"

"ಬೇಕಾದದ್ದು ಕೊಡಬಲ್ಲೆ ಮಾಣಿ. ನಾಳೆ ನೀನು ದೊಡ್ಡ ಕಲಾವಿದನಾಗಿ ಗಂಗೂಲಿಯವರು ಮಾಡಿದ ಮಹೋಪಕಾರವನ್ನು ನೆನೆಯುವೆಯಾದರೆ ಗಂಗೂಲಿಯವರ ಉದಾರದಾನಕ್ಕೆ ತಕ್ಕ ಪ್ರತಿಫಲವನ್ನು ಕೊಟ್ಟಂತಾಗುತ್ತದೆ. ಅವರದೆಷ್ಟು ಉದಾರ ಹೃದಯವೋ, ಅಷ್ಟೇ ದೊಡ್ಡದು ಕಲಾಕೌಶಲ್ಯ ಹಾಗೂ ಪಾಂಡಿತ್ಯ. ದೊಡ್ಡವರು ನಿನ್ನ ಕೃತಿಯನ್ನು ಮೆಚ್ಚಿ ಆಶೀರ್ವದಿಸಿದ್ದಾರೆ. ಇನ್ನು ದೊಡ್ಡವನಾಗಿ ಬೆಳೆಯುವುದು ನಿನ್ನನ್ನು ಸೇರಿದ ಕಾರ್ಯಭಾರ."

"ಹಾಗೆಯೇ ಆಗಲಿ ಸಾರ್. ತ್ರಿಕರಣಪೂರ್ವಕವಾಗಿ ನಾನು ಪ್ರಯತ್ನಿಸುತ್ತೇನೆ."

"ಇನ್ನೊಂದು ವಿಷಯ ಮಾಣಿ. ನೀನೂ ರಮೇಶನೂ ಒಟ್ಟಿಗೆ ಇರುವಾಗಲೇ ಆ ವಿಚಾರ ಪ್ರಸ್ತಾಪಿಸಬೇಕೆಂದಿದ್ದೆ. ಈಗ ಸುಸಂಧಿ ದೊರೆತಿದೆ."

"ಏನು ಹೇಳಿ ಸಾರ್."

"ಈ ಸಲದ 'ಆನಂದ'ದಲ್ಲಿ ನಿನ್ನ 'ಸಂದೇಶ' ಚಿತ್ರವನ್ನು ಪ್ರಕಟಿಸಬೇಕೆಂದು ನಿಶ್ಚಯಿಸಿರುವೆವು. ಅದಕ್ಕೆ ಸಂಪಾದಕ ಮಂಡಲಿಯವರು ನಿನಗೆ ೨೫ರೂಪಾಯಿಗಳ ಪ್ರತಿಫಲವನ್ನು ಕೊಡಲು ನಿಶ್ಚಯಿಸಿದ್ದಾರೆ. ಒಪ್ಪಿಗೆಯೋ?"

"ನನ್ನದೇನು ಸಾರ್. ಗುರುಗಳು ಹೇಗೆ ಹೇಳಿದರೆ ಹಾಗೆ ಮಾಡಲು ಸಿದ್ಧ."

"ಏನು ರಮೇಶ್. ನೀನು ಏನು ಹೇಳುವೆ?"

"ಅವಶ್ಯಕವಾಗಿ ಆಗಲಿ. ಮಾಣಿಗೆ ಹೇಗೂ ಸ್ವಲ್ಪ ರೇಷ್ಮೆ ವಸ್ತ್ರ ಬೇಕಾಗಿತ್ತು ಚಿತ್ರರಚನೆಗೆ. ಅದಕ್ಕೆ ಅನುಕೂಲವಾದ ಹಾಗಾಯಿತು."

"ಇನ್ನು ಬರುತ್ತೇನೆ. ನಾಳೆ ಒಂದು ಚೆಕ್ ಕಳುಹಿಸಿಕೊಡುತ್ತೇನೆ" ಎಂದು ಮುಕುಂದರಾಯರು ಬೀಳ್ಕೊಂಡರು.

ರಮೇಶನೂ ಮಾಣಿಯೂ ತುಟಿಪಿಟಿಕ್ಕನ್ನದೆ ಗಂಗೂಲಿಯವರು ಕಳುಹಿಸಿದ್ದ ಚಿತ್ರಸಂಗ್ರಹಗಳನ್ನು ನೋಡುತ್ತಾ ಕುಳಿತರು. ಚಿತ್ರಸಂಗ್ರಹಗಳನ್ನು ನೋಡುತ್ತಾ ನಾನಾ ಆಶೆಗಳು ಮಾಣಿಯ ಮನಸ್ಸಿನಲ್ಲಿ ಮೊಳೆಯಲಾರಂಭಿಸಿದುವು. ಅವುಗಳನ್ನು ರಮೇಶ ಗ್ರಹಿಸಿದನೋ ಏನೋ!

"ಏನು ಮಾಣಿ. ಅಜಂತಾ, ಎಲ್ಲೋರಾ, ಕಾರ್ಲ ಮೊದಲಾದ ಗುಹಾಂತರ್ದೇವಾಲಯಗಳನ್ನೆಲ್ಲಾ ಒಮ್ಮೆ ನೋಡಬೇಕೆನಿಸುವುದಲ್ಲವೇ ?"

"ಅವುಗಳನ್ನು ತಾವು ನೋಡಿದ್ದೀರಾ ಸಾರ್."

"ಎಲ್ಲೋ ಒಂದುಸಲ ಸ್ಥೂಲವಾಗಿ ನೋಡಿದ್ದೇನೆ. ಇಲ್ಲಿ ನೋಡು...." ಎಂದು ಹಳೆಯ ಪೆಠಾರಿಯೊಂದನ್ನು ತೆಗೆದು ಅದರಲ್ಲಿ ಅರ್ಧ ಗೆದ್ದಲು ತಿಂದು ಉಳಿದಿದ್ದ ದೊಡ್ಡ ಪುಸ್ತಕವನ್ನು ಮಾಣಿಯ ಕೈಗಿತ್ತು.

"ನಾನು ಎಲ್ಲೋರಾ, ಅಜಂತಾಗಳಿಗೆ ಹೋಗಿದ್ದಾಗ ತೆಗೆದುಕೊಂಡ ರೇಖಾಚಿತ್ರಗಳು. ಇವುಗಳ ಆಧಾರಗಳ ಮೇಲೆ ಕೆಲವು ಊಹಾ ಚಿತ್ರಗಳನ್ನು ಮಾಡಬೇಕೆಂದಿದ್ದೆ. ಆ ಆಶೆ ಎಂದಿಗೆ ಸಫಲವಾಗುವುದೋ ?"

"ನಾನು ಇವುಗಳಲ್ಲಿ ಕೆಲವನ್ನು ಪ್ರತಿಚಿತ್ರ ಮಾಡಲೇ ಸಾರ್. ಈ ರೇಖಾವಿನ್ಯಾಸ ನನಗೆ ಮುಂದೆ ಬಹಳ ಸಹಕಾರಿಯಾಗಬಹುದು."

"ಹಾಗೆಯೇ ಮಾಡು" ಎಂದು ಎದ್ದು "ಸ್ವಲ್ಪ ಕೆಲಸವಿದೆ" ಎಂದು ಹೇಳಿ ಹೊರಟುಹೋದ. ಮಾಣಿಯ ಹಿಗ್ಗಿಗೆ ಚ್ಯುತಿಯೇ ಇಲ್ಲ. 'ಇದೇನು! ನನ್ನ ಪ್ರಗತಿಗೆ ಒದಗುತ್ತಿರುವ ಇಂತಹ ಅಮೋಘವಾದ ದೈವಸಹಾಯ' ಎಂದು ಕಾಣದ ಆ ಕೃಪಾಹಸ್ತವನ್ನು ಮನಸಾ ಅಭಿವಂದಿಸಿದ.

## ೬

'ಆನಂದ' ಪತ್ರಿಕೆಯ ಕಾರ್ಯಾಲಯದಲ್ಲಿ ದೊಡ್ಡ ಮಂತ್ರಾಲೋಚನ ಸಭೆ ನೆರೆದು ಬಿಟ್ಟಿತ್ತು. ಸಭೆಯ ಸಂಖ್ಯೆ ಗಣನೀಯವಾದುದಲ್ಲವಾದರೂ ವಿಷಯ ಬಹಳ ಗಹನವಾದುದಾಗಿತ್ತು. ಲೋಕದ ಆಚಾರ ವಿಚಾರಗಳನ್ನೂ, ನಡತೆ ವ್ಯವಹಾರಗಳನ್ನೂ ತಿಳಿದಿದ್ದ ಮುಕುಂದರಾಯರೇ ಆಲೋಚ್ಯ ವಿಷಯವನ್ನಾರಂಭಿಸಿದ್ದರು. ತಿಂಗಳಿಗೆ ಒಂದು ಎರಡರಂತೆ ಮಾಣಿಯ ಚಿತ್ರಗಳ ಮಾರಾಟವಾಗುತ್ತಿದ್ದುದರಿಂದ ಅವನ ರಕ್ಷಣ ಭಾರ

ಕಡಿಮೆಯಾಗಿತ್ತು. 'ಆದರೆ ಕೇವಲ ಜೀವನೋಪಾಯವನ್ನು ಸಾಧಿಸುವುದರಲ್ಲಿಯೇ ಅವನ ಭವಿಷ್ಯ ಮುಗಿಯಬೇಕೇ?' ಎಂದು ಮುಕುಂದರಾಯರು ಪ್ರಶ್ನಿಸಿದರು.

"ಮುಗಿಯಕೂಡದು ಸರಿ. ಆದರೆ ಮುಂದೆ ಅವನಿಗೇನು ಗತಿ?" ಎಂದು ರಮೇಶನ ಉತ್ತರ.

"ಹುಡುಗ ಏನು ಹೇಳುತ್ತಾನೆ?"

"ಹುಡುಗನ ಮಾತು ಅನಂತರ ಬರಲಿ. ನೀನೇನು ಸೂಚಿಸುವೆ ರಮೇಶ?" ಎಂದು ಮೂರ್ತಿ ಕೇಳಿದ.

"ಅವನನ್ನು ನನ್ನ ಚಿತ್ರಶಾಲೆಗೆ ಪಾಲುಗಾರನಾಗಿ ನಾನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ. ಈಗ ನಮ್ಮಲ್ಲಿ ಫೋಟೋ ತೆಗೆಯುವ ಒಂದು ಭಾಗ, ಚಿತ್ರಕಲೆಯ ಒಂದು ಭಾಗವಿದೆ. ಮಾಣಿ ಚಿತ್ರಕಲೆಯ ಭಾಗವನ್ನು ನಡೆಸಿಕೊಂಡು ಬರಲಿ, ಬರುವ ಆದಾಯದಲ್ಲಿ ಅವನಿಗರ್ಧ; ನನಗರ್ಧ."

"ವ್ಯವಹಾರದ ದೃಷ್ಟಿಯೇನೋ ಚೆನ್ನಾಗಿದೆ' ಆದರೆ ಕಲಾದೃಷ್ಟಿಯ ಗತಿ! ಆ ಹುಡುಗನಿಗೆ ಈಗಲೇ ಆ ಬಗೆಯ ಜೀವನಕ್ಕೆ ಬೀಳುವುದಕ್ಕೆ ಇಚ್ಛೆಯಿಲ್ಲ. ಅವನಿಗಿನ್ನೂ ಕಲಿಯಬೇಕೆಂದು ಇಚ್ಛೆಯಿದೆ...." ಎಂದು ಮುಕುಂದರಾಯರು ಹೇಳಿದರು

"ಹೌದು ಮಾವಯ್ಯಾ, ನನಗೂ ಹಾಗೇ ಒಂದೆರಡು ಸಲ ಹೇಳಿದ. ಅವನಿಗೆ ಶಾಂತಿನೀಕೇತಕ್ಕೆ ಹೋಗಿ ನಂದಲಾಲ ಬಸು ಅವರಲ್ಲಿ ಕಲಿಯುವ ಹುಚ್ಚು ಪ್ರಬಲವಾಗಿ ಹಿಡಿದು ಬಿಟ್ಟಿದೆ."

"ಅದು ಒಳ್ಳೆಯ ಹುಚ್ಚೇ ಆಯಿತಲ್ಲಾ ರಮೇಶ್. ಇನ್ನು ಯೋಚನೆ ಏತಕ್ಕೆ?" ಎಂದು ಮೂರ್ತಿ ಸಮಾಧಾನ ಹೇಳಿದ.

"ಆಲೋಚನೆಯೇನೋ ಒಳ್ಳೆಯದೆ, ಆದರೆ ಸಾಧನೆಯ ವಿಚಾರ ತಾನೆ ಯೋಚನೆ. ಅಲ್ಲಿ ತಿಂಗಳಿಗೆ ೪೦–೫೦ ರೂಪಾಯಿಗಳಾದರೂ ಬೇಕಾಗುತ್ತದೆ. ಅದನ್ನು ಒದಗಿಸುವವರು ಯಾರು?"

"ನಾವು ಮೂವರೂ ಹಂಚಿಕೊಂಡು ಹೇಗಾದರೂ ಮಾಡಬೇಕು. ಈಗಲೇ ಪೋಸ್ಟ್ ಆಫೀಸಿನ ಸೇವಿಂಗ್ಸ್ ಬ್ಯಾಂಕಿನಲ್ಲಿ ಅವನದಾಗಿ ೧೦೦

ರೂಪಾಯಿ ಶೇಖರವಾಗಿವೆ. ಅದರ ಜೊತೆಗೆ ನಾವು ಮೂವರೂ ಹೇಗಾದರೂ ಸ್ವಲ್ಪ ಸ್ವಲ್ಪ ಸೇರಿಸಿದರೆ ೩-೪ ತಿಂಗಳು ಅವನು ಅಲ್ಲಿ ಜೀವನವನ್ನು ಜರುಗಿಸುವಂತೆ ಮಾಡಬಹುದು. ಅನಂತರ ತನ್ನ ಪಾಡನ್ನು ಅವನೇ ನೋಡಿಕೊಳ್ಳುತ್ತಾನೆ. ಕೆಲವು ಚಿತ್ರಗಳನ್ನು ಮಾರಲು ನಾವೂ ಸಹಾಯ ಮಾಡಬಹುದು" ಎಂದು ಮೂರ್ತಿ ಮುಕುಂದರಾಯರಿಗೆ ಸೂಚಿಸಿದ.

ರಮೇಶನಿಗೆ ಬಗೆಬಗೆಯ ಯೋಚನೆಗಳು ತೊಂದರೆ ಕೊಡಲಾರಂಭಿಸಿದವು. ಮಾಣಿಯ ಕಲಿಕೆಯಿಂದ ತಾನು ಗುರುದಕ್ಷಿಣಾರೂಪವಾಗಿ ನಿರೀಕ್ಷಿಸಿದ್ದ ಸೇವೆಯೆಲ್ಲಾ ಈ ವ್ಯವಸ್ಥೆಯಿಂದ ಹೋಮವಾಗಿ ಬಿಡುವುದಲ್ಲಾ ಎಂಬ ಚಿಂತೆ ಒಂದು ಕಡೆ, ಇಷ್ಟು ದಿನ ತಾನೆ ಅವನನ್ನು ಮುಂದಕ್ಕೆ ತಂದು ಈಗ ಅವನ ಅಭ್ಯುದಯಕ್ಕೆ ಅಡ್ಡವಾಗುವ ಕುಬುದ್ಧಿಯನ್ನೂ ಅಲ್ಪತನವನ್ನೂ ವ್ಯಕ್ತಗೊಳಿಸುವುದೇ ಎಂಬ ಚಿಂತೆ ಮತ್ತೊಂದು ಕಡೆ. ಕೊನೆಗೆ ಮಂತ್ರಾಲೋಚನಾ ಸಭೆ ಯಾವುದನ್ನೂ ನಿರ್ಧರಿಸದಾಯಿತು. ಮಾಣಿಯು ಮುಂದಿನ ವ್ಯಾಸಂಗಕ್ಕೆ ಶಾಂತಿನಿಕೇತನಕ್ಕೆ ಹೋಗುವುದು ರಮೇಶನಿಗೆ ಸರ್ವಥಾ ಇಷ್ಟವಿಲ್ಲವೆಂಬುದನ್ನು ಮುಕುಂದರಾಯರೂ ಮೂರ್ತಿಯೂ ಚೆನ್ನಾಗಿ ಗ್ರಹಿಸಿಕೊಂಡರು. ಹೇಗಾದರೂ ಮಾಡಿ ಮಾಣಿಯನ್ನು ತನ್ನಿಂದ ದೂರ ಮಾಡಬೇಕೆಂದು ಮೂರ್ತಿ, ಮುಕುಂದರಾಯರು ಸಂಚು ಮಾಡಿದ್ದಾರೆಂದು ರಮೇಶ ಭಾವಿಸಿಕೊಂಡ. ಅವರವರಲ್ಲಿಯೇ ಅಸಮಾಧಾನದ ಕಿಚ್ಚು ಹೊಗೆಯಾಡಲಾರಂಭಿಸಿತು. ಅಂದು ಯಾವುದೂ ಬಗೆಹರಿಯದಿರಲು ಮಾರನೆಯ ದಿವಸ ಖಂಡಿತವಾದ ಇತ್ಯರ್ಥಕ್ಕೆ ಬರುವುದೆಂದು ನಿರ್ಧರಿಸಿಕೊಂಡು ಮೂರ್ತಿ ಮುಕುಂದರಾಯರು ಮನೆಯ ದಾರಿ ಹಿಡಿದರು. ರಮೇಶ ಚಿಂತಿಸುತ್ತಾ ತನ್ನ 'ಚಿತ್ರ ಶಾಲೆ'ಗೆ ಬಂದು ಸಿಗರೇಟನ್ನು ಹಚ್ಚಿ ಸೇವಿಸುತ್ತಾ ಕುಳಿತ.

ಒಂಭತ್ತು ಗಂಟೆ ಹೊಡೆದರೂ ಮಾಣಿಯಿನ್ನೂ ಬಂದಿರಲಿಲ್ಲ. ತಾನಾದರೂ ಹೋಗಿ ಊಟಮಾಡಿ ಬರುವ ಎಂದು ಬೀಗ, ಬೀಗದೆಸಳನ್ನು ಹುಡುಕುತ್ತಿರಲು ಕೈಗೆ ಒಂದು ಲಕ್ಕೋಟೆ ದೊರಕಿತು. ಮಾಣಿಯ ಅಕ್ಷರ—ತನ್ನ ಹೆಸರಿಗೆ. ಆತುರದಿಂದ ಒಡೆದು ಓದಲಾರಂಭಿಸಿದ.

"ನನ್ನ ಜೀವನಸರ್ವಸ್ವರಾದ ಗುರು ಸನ್ನಿಧಿಯಲ್ಲಿ ಅನೇಕ ವಂದನೆಗಳು.

"ನನ್ನ ಜೀವನ ರೂಪುಗೊಂಡು, ನಾನೂ ಒಬ್ಬ ಮನುಷ್ಯನೆಂಬ ಭಾವನೆ ಯಾರಿಂದ ಬಂತೆಂದು ಇಲ್ಲಿ ಹೇಳಬೇಕಾದ ಅಗತ್ಯವಿಲ್ಲ. ಈ ಸಣ್ಣ ಜೀವನಕ್ಕೆ ದೊಡ್ಡ ಶಕ್ತಿಬಂದಾಗ—ಬಂದದಿವಸ ನನ್ನ ಕೃತಜ್ಞತೆಯನ್ನು ನಿವೇದಿಸಿಕೊಳ್ಳುತ್ತೇನೆ. ಈಗ ಈ ಕೃತಜ್ಞತೆಗೆ ಅತ್ಯಂತ ದೀನನಾಗಿ ಕ್ಷಮೆ ಬೇಡುತ್ತೇನೆ. ಶಾಂತಿನಿಕೇತನಕ್ಕೆ ತೆರಳಿ ಅಲ್ಲಿ ನಂದಲಾಲ್ ಗುರುಮುಖ ದಿಂದ ಮುಂದಿನ ಕಲಾಶಿಕ್ಷಣವನ್ನು ಪಡೆಯಬೇಕೆಂಬ ನನ್ನ ಹಂಬಲವನ್ನು ತಮ್ಮಲ್ಲಿ ಹತ್ತೆಂಟು ಬಾರಿ ಹೇಳಿಕೊಂಡರೂ ಯಾವ ಪ್ರೋತ್ಸಾಹವೂ ದೊರೆಯಲಿಲ್ಲ. ತಮಗೆ ಬೇಡದ ಕೆಲಸಕ್ಕೆ ಕೈ ಹಾಕಬಾರದೆಂದು ಎಷ್ಟೋ ಪ್ರಯತ್ನಿಸಿದೆ. ಆದರೆ ಯಾವುದೋ ಒಂದು ಪ್ರಬಲವಾದ ಶಕ್ತಿ ಅತ್ತಲತ್ತಲೇ ನನ್ನ ಮನಸ್ಸನ್ನು ಎಳೆಯಿತು. ಇಂದು ಮುಂದಿನ ಹಾದಿಯನ್ನು ನಿರ್ಧರಿಸಿ ಪೋಸ್ಟ್ ಆಫೀಸಿನಲ್ಲಿದ್ದ ನನ್ನ ೧೦೦, ರೂಪಾಯಿಗಳನ್ನು ತೆಗೆದುಕೊಂಡು ಇದೇ ರಾತ್ರಿ ಮದರಾಸಿನ ಮೂಲಕ ಕಲ್ಕತ್ತೆಗೆ ಪ್ರಯಾಣ ಬೆಳಸಿದ್ದೇನೆ. ತಾವು 'ಆನಂದ' ಕಾರ್ಯಾಲಯಕ್ಕೆ ಹೋಗುತ್ತಿದ್ದುದನ್ನು ದೂರದಿಂದಲೇ ಕಂಡು, ನಿಂತ ಕಡೆಯಿಂದಲೇ ಕೈಮುಗಿದು ಅಪ್ಪಣೆ ತೆಗೆದುಕೊಂಡೆ. ತಾವೂ, ಮೂರ್ತಿರಾಯರೂ, ಮುಕುಂದರಾಯರೂ ನನ್ನ ಭಾಗ್ಯದ ದೇವರುಗಳು. ಈ ಮಾನವಜೀವನ ನನ್ನದಾಗಿರುವವರೆಗೂ ತಮ್ಮನ್ನೂ ತಮ್ಮ ಅನ್ಯಾದೃಶ ಪ್ರೇಮವನ್ನೂ ಮರೆಯುವುದಿಲ್ಲ. ಬಾಲಕನ ಅನೇಕ ಅಪರಾಧಗಳನ್ನು ಈವರೆಗೂ ಮರೆತು ಉಪಕರಿಸಿ ಕರುಣಿಸಿರುವಂತೆ ಇವನ್ನೂ ಮನ್ನಿಸಿ ಹರಸ ಬೇಕಾಗಿ ಬೇಡುತ್ತೇನೆ. ಮುಕುಂದರಾಯರಿಗೂ ಮೂರ್ತಿರಾಯರಿಗೂ ನನ್ನ ಅನೇಕಾನೇಕ ನಮಸ್ಕಾರಗಳನ್ನರ್ಪಿಸುವುದು.

ಇಂತು ತಮ್ಮ ಚರಣಸೇವಕ—ಮಾಣಿ."

ರೋಷದಿಂದ ಉಗ್ರಆಗ್ರಹದಿಂದ ರಮೇಶನ ದೇಹಾದ್ಯಂತವೂ ಕಂಪಿಸ ತೊಡಗಿತು. ಕೊನೆಗೂ ಮೋಸ—ಕೊನೆಗೂ ವಿಶ್ವಾಸದ್ರೋಹ—ಕೊನೆಗೂ ಹುಟ್ಟಿಗೆ ತಕ್ಕ ವರ್ತನೆ ಎಂದು ತನ್ನಲ್ಲಿಯೇ ಗೊಣಗುಟ್ಟಿಕೊಂಡ. ಮುಖ್ಯ

ಕಸದ ಹುಳುವನ್ನು ದೊಡ್ಡದು ಮಾಡಿದ್ದು ತನ್ನ ತಪ್ಪೆಂದು ತನ್ನನ್ನು ತಾನೆ ನಿಂದಿಸಿಕೊಂಡ. ಇದಕ್ಕೆಲ್ಲಾ ಮೂರ್ತಿ, ಮುಕುಂದರಾಯರೇ ಕಾರಣರೆಂದು ಅವರನ್ನೂ ನಿಂದಿಸಿದ. ಹೇಗಾದರೂ ಆಗಲಿ—ಅವರಿಗೆ ಈ ಪತ್ರವನ್ನು ತೋರಿಸಿ ಮುಂದಿನ ಕಾರ್ಯಕ್ರಮವನ್ನು ನಿರ್ಧರಿಸುವ, ಎಂದು ಚಿತ್ರಶಾಲೆಗೆ ಬೀಗಹಾಕುವುದನ್ನೂ ಮರೆತು ಆತುರದಿಂದ ಮೂರ್ತಿಯ ಮನೆಗೆ ಓಡಿದ.

೭

ಮುಂಜಾನೆ ಏಳು ಘಂಟೆಯ ಸಮಯಕ್ಕೆ ರೈಲು ಮದರಾಸನ್ನು ಮುಟ್ಟು ವವರೆಗೆ ಮಾಣಿ ತನ್ನ ಇರವನ್ನು ಮರೆತು ಹೊತ್ತುಗಳೆದ. ರಾತ್ರಿಯೆಲ್ಲಾ ಅತ್ತು ಅತ್ತು ಕಣ್ಣುಗಳೆರಡೂ ಕಾದ ಕಬ್ಬಿಣದ ಸಲಾಕೆಗಳಂತಾಗಿದ್ದವು. ತಾನು ಏನು ಮಾಡಿದೆನೆಂದು ಯೋಚಿಸಿ ಮನಸ್ಸಿಗೆ ಸಮಾಧಾನ ಹೇಳುವ ಸ್ಥಿತಿಯನ್ನೂ ಅವನ ದುಃಖ ದಾಟಬಿಟ್ಟಿತ್ತು. ಮದರಾಸಿನಲ್ಲಿ ಇಳಿಯಲೇ ಬೇಕಾಯಿತು. ಮತ್ತೆ ರಾತ್ರಿ ೮॥ ಘಂಟೆಯತನಕ ಕಲ್ಕತ್ತೆಯ ಗಾಡಿ ಹೊರಡುವಹಾಗಿರಲಿಲ್ಲ. ರೈಲ್ವೆ ನಿಲ್ದಾಣದಲ್ಲಿಯೇ ತನ್ನ ಸಾಮಾನನ್ನು ಇಟ್ಟು ಸಮೀಪದಲ್ಲಿದ್ದ ಒಂದು ಹೋಟಲಿಗೆ ಹೋಗಿ ಸ್ನಾನ ಮಾಡಿ ಸ್ವಲ್ಪ ಉಪಹಾರವನ್ನು ತೆಗೆದುಕೊಂಡು ನಗರವನ್ನು ಹೇಗೂ ಒಮ್ಮೆ ನೋಡಿಬಿಡುವ ಎಂದು ಹೊರಟ.

ಬೆಂಗಳೂರನ್ನು ಬಿಟ್ಟು ಹೊರಕ್ಕೆ ಬಂದಿದ್ದುದು ಅದೇ ಮೊದಲು. ವಿಶಾಲವಾದ ಅಪರಿಚಿತ ನಗರ. ಹರಕು ಮುರುಕು ತಮಿಳಿನ ಅರ್ಥವಾಗು ತ್ತಿದ್ದಿತೇ ವಿನಾ ಮಾತನಾಡಲು ಬರುತ್ತಿರಲಿಲ್ಲ. ಇಂಗ್ಲೀಷ್ ಭಾಷೆಯ ಪರಿಚಯವೂ ಅಷ್ಟಷ್ಟೇ. ಜತೆಗೆ ಬಗೆಬಗೆಯ ಸುಲಿಗೆಗಾರರ ಹಾವಳಿಯ ಭೀತಿ. ಮೊದಲು ಸಮುದ್ರವನ್ನು ನೋಡಬೇಕೆಂಬ ಕುತೂಹಲ ಮಾಣಿಯನ್ನು ಪ್ರಬಲವಾಗಿ ಬಾಧಿಸುತ್ತಿತ್ತು. ಟ್ರಿಪ್ಲಿಕೇನಿಗೆ ಹೋಗುತ್ತಿದ್ದ ಒಂದು ಬಸ್ಸನ್ನು ಹತ್ತಿ ಹೊರಟ, ಬಸ್ಸಿನ ಹಣ ಕೊಟ್ಟರೂ 'ಇವನು ಕೊಡಲಿಲ್ಲ'ವೆಂದು ಸುಳ್ಳು ಹೇಳಿ ಕಂಡಕ್ಟರ್ ಅದು ಅರ್ಧ ದಾರಿಗೆ ಬರುವ ವೇಳೆಗೆ ಗಲಭೆ ಮಾಡ

ಲಾರಂಭಿಸಿದ. ಜನಗಳ ಆಡಿಕೆಯ ಮಾತು ಯಥಾರ್ಥವಾದ್ದುದನ್ನು ನೆನೆಯುತ್ತ, ಕನ್ನಡದಲ್ಲಿ ಕಂಡಕ್ಟರನ್ನು ಬಯ್ದುಕೊಳ್ಳುತ್ತಾ ಮತ್ತೆ ಒಂದಾಣೆ ಋಣ ತೆತ್ತು ಪ್ರಯಾಣ ಬೆಳಸಿದ. ಈ ಚಮತ್ಕಾರ ನೋಡುತ್ತಿದ್ದ ಪ್ರಯಾಣಿಕನೊಬ್ಬ ಮಾಣಿ ಕನ್ನಡ ಮಾತನಾಡಿಕೊಂಡದ್ದನ್ನು ಕಂಡು, ಬಸ್ಸು ನಿಂತ ಮೇಲೆ ಅವನ ಬಳಿಗೆ ಬಂದು ಕನ್ನಡದಲ್ಲಿ

"ನೀವು ಯಾರು ಸಾರ್, ಎಲ್ಲಿಂದ ಬಂದಿರಿ" ಎಂದು ಕೇಳಿದ.

ಕನ್ನಡ ಮಾತನಾಡುವವನೊಬ್ಬ ದೊರೆತದ್ದು ಮಾಣಿಗೆ ಬಹಳ ಸಂತೋಷವಾಯಿತು. ಸೂಕ್ಷ್ಮವಾಗಿ ತಾನು ಯಾರೆಂಬುದನ್ನೂ ಮದರಾಸಿನಂತಹ ಮಹಾನಗರಕ್ಕೆ ಬರಲು ಕಾರಣವನ್ನೂ ತಿಳಿಸಿದ. ಗೆಳೆಯ—

"ನಾನು ಇಲ್ಲೇ ಲಾ ಕಾಲೇಜಿನಲ್ಲಿ ಓದುತ್ತಿದ್ದೇನೆ ಸಾರ್. ಇಲ್ಲಿ ಐದೇ ನಿಮಿಷದ ಕೆಲಸವಿದೆ. ಜತೆಯಲ್ಲೇ ಬನ್ನಿ, ಜೇಗ ಮುಗಿಸಿ ನಿಮ್ಮ ಜತೆಯಲ್ಲೇ ಬಂದು ನಿಮಗೆ ಬೇಕಾದುದೆಲ್ಲವನ್ನೂ ತೋರಿಸುತ್ತೇನೆ. ಮದರಾಸಿನ ಕಷ್ಟಸುಖಗಳನ್ನು ನೀವಿನ್ನೂ ಕಾಣಿರಿ. ಇಲ್ಲಿ ರಕ್ತವನ್ನೇ ಹೀರಿಬಿಡುತ್ತಾರೆ" ಎಂದು ಜೇಗ ತಾನು ನೋಡಬೇಕೆಂದಿದ್ದ ಗೆಳೆಯರನ್ನು ಕಂಡು ಬಂದು ಮಾಣಿಯನ್ನು ಮತ್ತೆ ಸೇರಿದ. ಈ ಅನಿರೀಕ್ಷಿತವಾದ ಸಹಾಯ ತನಗೆ ಹೇಗೆ ದೊರೆಯಿತೆಂಬುದನ್ನು ಮಾಣಿ ಪೃಥಕ್ಕರಿಸಲಾರದಾದ. ಗೆಳೆಯನನ್ನು ಕುರಿತು

"ತಮ್ಮ ಹೆಸರೇನು ಸಾರ್."

"ರಾಮಶರ್ಮ."

"ತಾವೂ ಮೈಸೂರಿನವರೆ ?"

"ಅಹುದು. ನನ್ನದು ಚಿತ್ರದುರ್ಗ. ನಮ್ಮ ತೀರ್ಥರೂಪರವರು ಅಲ್ಲಿ ಲಾಯರಾಗಿದ್ದಾರೆ. ನನಗೆ ಇದೇ ಕೊನೆಯ ವರ್ಷ. ಈ ವರ್ಷ ದೈವವಶದಿಂದ ತೇರ್ಗಡೆಯಾದರೆ ತೀರ್ಥರೂಪರ ಜತೆಯಲ್ಲಿ ವಕೀಲಿ ಮಾಡಬೇಕೆಂದಿದ್ದೇನೆ." ಎಂದು ಬಹಳ ಸರಳಹೃದಯದಿಂದ ತನ್ನ ವೃತ್ತಾಂತವನ್ನು ಹೇಳಿದ. ಮತ್ತೆ ಮಾಣಿ

"ನನಗೆ ಸಹಾಯ ಮಾಡಲು ತಮಗೆ ತೊಂದರೆಯಾಗುವುದಿಲ್ಲವೇ ? ಇವತ್ತು ಕಾಲೇಜಿಲ್ಲವೇ ?"

"ಇದೆ. ಆದರೆ ಒಂದು ದಿವಸ ಹೋಗದಿದ್ದರೆ ಪರವಾ ಇಲ್ಲ. ನನ್ನ ಮೈಸೂರಿನವರನ್ನು ಕಂಡರೆ ಏನೂ ಬೇಡವಾಗುವುದು ನೋಡಿ. ಇದೇನು ಕನ್ನಡದ ಮಹಿಮೆಯೋ ನಮ್ಮ ಜನದ ಅಂತಃಕರಣವೋ ನನಗೆ ಬೇರೆ ತಿಳಿಯದು."

"ಹೌದು—ಹೌದು. ನಮ್ಮ ಜನದ ಅಂತಃಕರಣ" ಎಂದು ಬಹಳ ನಿಧಾನವಾಗಿ ಅಂತರ್ದೃಷ್ಟಿಯಿಟ್ಟು ನುಡಿದ. ಈ ವೇಳೆಗೆ ಟ್ರಿಪ್ಲಿಕೇನಿನ ಮಳಲ ದಂಡೆಯ (Beach) ಬಳಿಗೆ ಬಂದಿದ್ದರು. ತನ್ನೆದುರಿಗೆ ವಿಶ್ವ ರೂಪವನ್ನು ತಾಳಿ ನಿಂತು ಘೋರ್ಗರೆಯುತ್ತಿದ್ದ ಮಹಾನೀಲ ಸಮುದ್ರ ವನ್ನು ನೋಡಿ ಮಾಣಿ ಮೈಮರೆತ. ದಿಗಂತವಾಗಿ ವ್ಯಾಪಿಸಿದ ಸಮುದ್ರದಾಚೆ ಕಣ್ಣು ಚಾಚಿ 'ಅಲ್ಲಿ ಏನಿರಬಹುದು....ನಮ್ಮ ಹಾಗೆಯೇ ಮನುಷ್ಯನಿರಬಹುದೇ....ಅಥವಾ ಸ್ವರ್ಗ ನರಕಗಳೆಂದು ವರ್ಣಿಸಲ್ಪಡುವ ಲೋಕವಿರಬಹುದೇ?' ಎಂದು ಯೋಚಿಸಿದ. ತನ್ನ ಬಳಿಗೆ ಬಂದು ನಿರ್ಭೀತಿಯಿಂದ ಹೊಡೆಯುತ್ತಿದ್ದ ಅಲೆಗಳ ದಿಟ್ಟತನವನ್ನು ನೋಡಿ 'ಎಂತಹ ಸ್ವಾತಂತ್ರ್ಯ' ಎಂದು ಹಿಗ್ಗಿದ. ಈ ಮಹಾಸಾಗರವನ್ನು ಒಮ್ಮೆಯಾದರೂ ಸೆರೆಹಿಡಿದು ತನ್ನ ವೇಶ್ಮಚಿತ್ರದಲ್ಲಿ ಅಣಗಿಸಿಬಿಡಬೇಕು. ಇದರ ಶಾಂತಿ, ಗಾಂಭೀರ್ಯ, ಬಳಕು, ಒಯ್ಯಾರ, ರೋಷವೇಷಗಳನ್ನು ತೋರಿಸಬೇಕು ಎಂದು ನಿರ್ಧರಿಸಿಕೊಂಡ. ಮರುಕ್ಷಣವೇ 'ಎಂತಹ ಮೌಢ್ಯ. ಈ ನೀಲಜಲದ ಒಂದು ಕಣವನ್ನು ನಾನು ಸೃಷ್ಟಿಮಾಡಬಲ್ಲೆನೇ. ಇದನ್ನು ಸೃಷ್ಟಿಸಿರುವವನು ಎಂತಹ ಹಿಮಮಾಶಾಲಿಯಾದ ಕಲಾವಿಭೂತಿ. ಅವನ ಕೃತಿಯನ್ನು ನಾನು ಪ್ರತಿಸ್ಪರ್ಧಿಸುವೆನೆಂದರೆ ಅಲ್ಪತನದಿಂದ ಅಣಕಿಸಿ ದಂತೆಯೇ ಅಲ್ಲವೆ' ಎಂದು ಭಾವಿಸುವ. 'ಆದರೆ ಆ ಕಲಾವಿಭೂತಿಯನ್ನು ನಾನು ನೋಡುವುದು ಅವನ ಕೃತಿಗಳ ಬಗ್ಗೆ ನನಗಿರುವ ಸಹಾನು ಭೂತಿಯನ್ನು ತೋರುವ ಮೂಲಕವೇ ಅಲ್ಲವೆ' ಎಂದು ಸಮಾಧಾನಪಟ್ಟು ಕೊಂಡ. ಗೆಳೆಯ ಮೆಲ್ಲನೆ ಎಚ್ಚರಗೊಟ್ಟ. ಮಾಣಿ ಎದ್ದು ಅವನನ್ನು ಹಿಂಬಾಲಿಸಿದ. ಗೆಳೆಯ ಅವನನ್ನು ತಾನಿದ್ದ 'ವಿದ್ಯಾ ಭವನ'ಕ್ಕೆ ಕರೆದೊಯ್ದು ಅಲ್ಲಿ ಪುಷ್ಕಳ ಭೋಜನ ಮಾಡಿಸಿ 'ಸ್ವಲ್ಪಕಾಲ ವಿಶ್ರಮಿಸಿಕೊಳ್ಳಿರಿ. ಸುಮಾರು ಎರಡು ಗಂಟೆಯ ಹೊತ್ತಿಗೆ ಮತ್ತೆ

ಹೊರಡುವಾ. ನೀವು ಮತ್ತೆ ಎರಡು ರಾತ್ರಿಗಳನ್ನು ನಿದ್ದೆಯಿಲ್ಲದೆ ಕಳೆಯ ಬೇಕಾಗುತ್ತದೆ' ಎಂದು ಮಲಗಲು ಅಣಿಮಾಡಿಕೊಟ್ಟು ತಾನೂ ಒಂದೆಡೆ ಮಲಗಿದ. ಎರಡು ಗಂಟೆ ಬಡಿಯಲು ಗೆಳೆಯ ಎದ್ದು ಕಾಫಿ ತಿಂಡಿಗಳಿಗೆ ಹೇಳಿ ಬಂದು ಮಾಣಿಯನ್ನು ಎಚ್ಚರಿಸಿ ಉಪಹಾರ ಮುಗಿಸಿ ಅವನ ಜತೆಯಲ್ಲಿ ಮತ್ತೆ ನಗರ ಪರ್ಯಟನಕ್ಕೆ ಹೊರಟ.

ಬ್ರಾಡ್ವೆ, ಮೌಂಟ್‌ರೋಡ್ ಮೊದಲಾದ ದೊಡ್ಡ ದೊಡ್ಡ ಬೀದಿಗಳನ್ನು ನೋಡಿಯಾಯಿತು; ನ್ಯಾಯಸ್ಥಾನ, ಕಾಲೇಜುಗಳು, ಸೆಕ್ರೆಟೇರಿಯಟ್, ಮೊದಲಾದ ದೊಡ್ಡ ದೊಡ್ಡ ಕಟ್ಟಡಗಳನ್ನು ನೋಡಿಯಾಯಿತು. 'ಕಲಾಭವನ'ವನ್ನು ನೋಡಿಕೊಂಡು ಮ್ಯೂಸಿಯಂ ಕಡೆಗೆ ಹೊರಟರು. ಅಲ್ಲಿ ಸಂಗ್ರಹವಾಗಿದ್ದ ಕಂಚಿನ ಪ್ರತಿಮೆಗಳ ಕಲಾವೈಶಿಷ್ಟ್ಯವನ್ನು ಕಂಡು ಮಾಣಿ ಬೆರಗಾದ. ನಟರಾಜನ ಮೂರ್ತಿ ಅವನ ಹೃದಯದಲ್ಲಿ ಅಚ್ಚಳಿಯದಂತೆ ನಿಂತಿತು. ಇಂದು ಹುಟ್ಟಿದ ಭೈರವಗಾನ ಎಂದಾದರೂ ಬೆಳೆದು, ಮಹೋನ್ನತಿಯಿಂದ ಮೆರೆದಾಗ ಅದನ್ನು ತನ್ನ ಕುಂಚದಿಂದ ಹೊರಗಾಣಿಸುವುದು ಎಂದು ನಿಶ್ಚಯಿಸಿಕೊಂಡ

ಆಗಲೆ ಏಳು ಗಂಟೆಯ ಸಮಯವಾಗಿತ್ತು. ಗೆಳೆಯನೊಂದಿಗೆ ರೈಲ್ವೆ ನಿಲ್ದಾಣಕ್ಕೆ ಬಂದು ತನ್ನ ಹಾಸಿಗೆಯ ಗಂಟನ್ನು ಕಲ್ಕತ್ತೆಗೆ ಹೋಗುವ ಗಾಡಿಯಲ್ಲಿ ಬಿಚ್ಚಿ ಹಾಸಿಕೊಂಡು ಕುಳಿತ. ಗೆಳೆಯನೂ ಅವನೊಂದಿಗೆ ಮಾತನಾಡುತ್ತ ಕುಳಿತು ಕಲ್ಕತ್ತೆಯ ತನ್ನ ಕೆಲವು ಗೆಳೆಯರ ವಿಳಾಸವನ್ನಿತ್ತು 'ಅವರಲ್ಲಿಯೇ ಹೋಗಿ, ನಿಮಗೆ ಎಲ್ಲಾ ಸೌಕರ್ಯವನ್ನು ಕಲ್ಪಿಸಿಕೊಡುವರು' ಎಂದು ಆಶ್ವಾಸನ ಕೊಟ್ಟ. ಮಾಣಿ ಗೆಳೆಯನ ಮದರಾಸಿನ ಮತ್ತು ಚಿತ್ರದುರ್ಗದ ಎರಡು ವಿಳಾಸಗಳನ್ನೂ ತೆಗೆದುಕೊಂಡು 'ಶಾಂತಿನಿಕೇತನ'ಕ್ಕೆ ತಲುಪಿದೊಡನೆಯೇ ಪತ್ರ ಬರೆಯುವುದಾಗಿ ಮಾತು ಕೊಟ್ಟ. ಈ ಅಪರಿಚಿತ ತನ್ನ ಮೇಲೆ ಹೊರೆಸುತ್ತಿದ್ದ ಹೊರೆಯ ಉಪಕಾರಕ್ಕೆ ಪ್ರತ್ಯುಪಕಾರಮಾಡಲು ತನ್ನಲ್ಲಿ ಏನೂ ಇಲ್ಲವಲ್ಲಾ ಎಂದು ಬಹಳ ವಿಷಾದಪಟ್ಟ.

ಮೊದಲನೆಯ ಗಂಟೆಯ ಬಡಿತ ಕೇಳಬಂತು. ಗೆಳೆಯ ಗಾಡಿ

ಯನ್ನಿಳಿದು ಬಂದು ಹೊರಗೆ ನಿಂತು ಮಾಣಿಯ ಎರಡು ಕೈಗಳನ್ನೂ ಬಿಗಿಯಾಗಿ ಹಿಡಿದು.

"ನೀವು ದೊಡ್ಡ ಉದ್ದೇಶದಿಂದ ಹೋಗುತ್ತಿರುವಿರಿ. ಹೋಗಿ ಬನ್ನಿ. ನಮ್ಮ ದೇಶಕ್ಕೆ ದೊಡ್ಡ ಕೀರ್ತಿ ತನ್ನಿ. ನಿಮಗೆ ಮಂಗಳವಾಗಲಿ" ಎಂದು ಹೇಳುತ್ತ ಹೇಳುತ್ತ ಗಂಟಲು ಕಟ್ಟಿಬಂದಿತು. ಮಾಣಿಯ ಕಣ್ಣುಗಳಲ್ಲಿಯೂ ನೀರೂರಿತು. ಅವನನ್ನು ಸೇವರಿಸುತ್ತಾ

"ಶರ್ಮರೇ, ನಾನು ಭಾಗ್ಯಶಾಲಿ. ಇಲ್ಲದಿದ್ದರೆ ನಿಮ್ಮಂತಹ ಸಹೃದಯರು ಇಷ್ಟು ಸುಲಭವಾಗಿ ದೊರೆಯುತ್ತಿದ್ದರೇ" ಎಂದು ಹೇಳುತ್ತಿರುವಂತೆ ಎರಡನೆಯ ಗಂಟೆಯೂ ಆಯಿತು-ಗಾರ್ಡನ ಶಿಲ್ಪಿ ಆಯಿತು-ರೈಲು ಮೆಲ್ಲನೆ ಮುಂದಕ್ಕೆ ಅಡಿಯಿಟ್ಟಿತು. ಕಣ್ಣಿಗೆ ಕಾಣುವತನಕ ಗೆಳೆಯನನ್ನೇ ನೋಡುತ್ತ ನಿಂತಿದ್ದು, ಮೆಲ್ಲನೆ ಹೊರಲಾರದ ಹೃದಯ ಹೊತ್ತು ತನ್ನ ಹಾಸಿಗೆಯ ಮೇಲೆ ಬಂದು ಬಿದ್ದ.

ಒಂದೆಡೆ ತಿಗಣೆಗಳ ಕಾಟ-ಮತ್ತೊಂದೆಡೆ ಆಂಧ್ರರ 'ಸ್ವದೇಶೀ ಸಿಗಾರುಗಳ' (ಚುರುಟ್) ಕೆಟ್ಟ ನಾತ-ಮಗದೊಂದು ಕಡೆ ಗಾಡಿ ಹತ್ತಿ ಇಳಿಯುವವರ ಗಲಭೆ, ಗಡಿಬಿಡಿ, ವ್ಯಾಜ್ಯ, ವಾದ್ಯ, ಸಂತೋಷಗೋಷ್ಠಿ, ಕ್ಷೇಮಸಮಾಚಾರ ವಿನಿಮಯ, ವಿವಿಧಜ್ಞಾನವಿಸ್ತಾರ-ಇವುಗಳೆಲ್ಲದರ ಮೇಲೆ ಕಲಶವಿಟ್ಟಂತೆ ತನ್ನ ಅಂತರಂಗದೊಳಗಾಗುತ್ತಿದ್ದ ಸಮರ. ಒಂದೊಂದು ಸ್ಟೇಷನ್ನನ್ನು ದಾಟಿತೆಂದರೆ ತನ್ನ ಕನಸಿನ ಶಾಂತಿನಿಕೇತನಕ್ಕೆ ಹತ್ತಿರಹತ್ತಿರವಾಗುತ್ತಿದ್ದೇನಲ್ಲಾ ಎಂದು ಸಂತೋಷಿಸುವನು—ಮರುಕ್ಷಣವೇ ನನ್ನ ಮುದ್ದಿನ ಮೈಸೂರಿನಿಂದ ದೂರದೂರವಾಗುತ್ತಿದ್ದೇನಲ್ಲಾ ಎಂದು ದುಃಖಿಸುವನು. ಅವನ ಜೀವನದಲ್ಲಿ ಒಮ್ಮೆಲೇ ವರ್ಷಾವಸಂತ ಋತುಗಳೆರಡೂ ಮೂಡಿದಂತಾಗಿತ್ತು; ಒಮ್ಮೆಲೇ ಶುಕ್ಲ ಕೃಷ್ಣಪಕ್ಷದ ಚಂದ್ರಮರು ತಮ್ಮ ತಮ್ಮ ಪ್ರಭಾವವನ್ನು ಆರಂಭಿಸಿದಂತಾಗಿತ್ತು. ದೂರದ ದೇಶ—ಅಪರಿಚಿತರ ನೆರೆ—ತನ್ನ ಅಂತರಂಗವನ್ನರಿಯದವರ ಕೂಡ ಬಾಳುವೆ ಇವನ್ನು ನೆನೆದು 'ಈಗಲೂ ಹಿಂದಿರುಗಿ ಬಿಡಲೆ' ಎಂದು ಯೋಚಿಸುವನು. ಮರುಕ್ಷಣವೇ 'ವೀರನಂತೆ ಸೋಗು ಹಾಕಿ ಹೇಡಿಯ ಹೃದಯವನ್ನು ಹೊರತೋರಲೇ—ನನ್ನ ಮೂವರು ಬಂಧುಗಳು ಏನಂದು

ಕೊಂಡಾರು ?'....ಅವರನ್ನು ತಾನು ಬಿಟ್ಟು ಬಂದದ್ದು—ಅವರಿಗೆ ಬರೆದಿಟ್ಟ ಕಾಗದ ಎಲ್ಲವನ್ನೂ ನೆನೆದ. 'ಅವರನ್ನು ಕೊನೆಯ ಬಾರಿ ನೋಡದೆ ಬಂದದ್ದು ತಪ್ಪಾಯಿತು. ಪುನಃ ಅವರೆಲ್ಲರ ಸಂದರ್ಶನ ದೊರೆಯುವುದೋ ಇಲ್ಲವೋ—ಎಂತಹ ಕೆಲಸವನ್ನು ಮಾಡಿಬಿಟ್ಟೆ' ಎಂಬ ಪಶ್ಚಾತ್ತಾಪದ ಹೊನಲಿಗೆ ಸಿಲುಕಿದ. 'ನಾನು ಖ್ಯಾತಿವಂತನಾದರೆ—ಮೈಸೂರಿಗೆ ತಕ್ಕ ಮಗನಾದರೆ ತಾಯ್ನಾಡಿಗೆ ಮರಳುವೆನು ಇಲ್ಲನಾದರೆ ಬೇರೆ ಎಲ್ಲಿ ಯಾದರೂ ಈ ಹಾಳು ಬಾಳನ್ನು ನೀಗುವೆನು' ಎಂದು ನಿರ್ಧರಿಸಿ ಕೊಂಡ. ಈ ನಿರ್ಧಾರ ವಾಣಿಗೆ ಕೋಟಿ ಸಿಂಹಗಳ ಬಲವನ್ನು ತಂದಿತು. 'ಖ್ಯಾತನಾಗುವೆನು—ಖ್ಯಾತನಾಗಲೇಬೇಕು. ಮೈಸೂರಿಗೆ ಹಿಂದಿರು ಗಲೇಬೇಕು—ಅಲ್ಲಿ ನನ್ನ ವಿದ್ಯೆಯ ಸದ್ವಿನಿಯೋಗ ಮಾಡಲೇ ಬೇಕು—ನನ್ನಂತೆ 'ವಿದ್ಯೆ ವಿದ್ಯೆ'ಯೆಂದು ಬಸವಳಿಯುತ್ತಿರುವವರ ಹಸಿವನ್ನು ಹಿಂಗಿಸಲೇಬೇಕು' ಎಂದು ಸಂಕಲ್ಪ ಮಾಡಿದ. ಕಣ್ಣಿಗೆ ಜೋಂಪು ಹಿಡಿಯುತ್ತ ಬಂದಿತು.

ಬೆಳಿಗ್ಗೆ ಏಳುವ ಹೊತ್ತಿಗೆ ರಾಜಮಹೇಂದ್ರಿ ಸ್ಟೇಷನ್ನಿನಲ್ಲಿ ಕಾಫಿ ದೋಸೆಗಳ ಮಹಾಸಮಾರಾಧನೆ ನಡೆದಿತ್ತು. ವಾಣಿ ಮೆಲ್ಲನೆದ್ದು ಮುಖಮಾರ್ಜನಾದಿಗಳನ್ನು ತೀರಿಸಿ ಅಲ್ಪಾಹಾರವನ್ನು ಮುಗಿಸಿ ತನ್ನ ಗಾಡಿ ಯಲ್ಲಿ ಬಂದು ಕುಳಿತ. ತನ್ನ ಗಾಡಿಯಲ್ಲಿ ಕುಳಿತಿದ್ದ ಬಗೆಬಗೆಯ ಜನದ ರೂಪಗುಣಗಳನ್ನು ಪರೀಕ್ಷಿಸುತ್ತ ಕುಳಿತನು. ಒಂದು ಮೂಲೆಯಲ್ಲಿ ಅರ್ಧ ನಿದ್ರೆಯಲ್ಲಿ ಗೊರಕೆ ಹೊಡೆಯುತ್ತಿದ್ದ ನಡುಪ್ರಾಯದ ಹೆಣ್ಣು ಮಗಳ ಮುಖದ ಮೇಲಿದ್ದ ಚಿಂತೆ; ತನ್ನೆದುರಾಗಿ ಕುಳಿತು ಚುರುಟನ್ನು ಸೇವಿಸುತ್ತಾ ಗಂಟೆಗೆ ಹತ್ತು ಸಲ 'ಎನ್ನಿ ಗಂಟೆ ಲಂಡೀ' (ಗಂಟೆ ಎಷ್ಟರೀ ?) ಎಂದು ಕೇಳುತ್ತಿದ್ದ ಮುದುಕನ ಮುಖದ ಮೇಲಿದ್ದ ಅಸಂಖ್ಯಾತ ರೇಖೆಗಳ ಮಧ್ಯೆ ಹಣಿಕಿ ಹಾಕುತ್ತಿದ್ದ ಎಳಸಾದ ನಗೆ; ತನ್ನ ಬಲಪಕ್ಕದ ಒಂದು ಕೊನೆಯಲ್ಲಿ ಕಾಲಿನ ಮೇಲೆ ಕಾಲು ಹಾಕಿ ಕುಳಿತು ಏನನ್ನೋ ಚಿಂತಿಸುತ್ತಿದ್ದ ಮಾರ್ವಾಡಿಯ ಮುಖದ ಮೇಲಿದ್ದ ಲೆಖ್ಖದ ಪಟ್ಟೆ—ಇವುಗಳೆಲ್ಲಾ ಬೇಸರವನ್ನು ತುಸು ನೀಗಿಸುತ್ತಾ ಬಂದವು. ನೋಡಿದುದನ್ನು ಹಾಗೆಯೇ ಬಿಟ್ಟರೆ ಸುಖವಿಲ್ಲವೆಂದು ತನ್ನ 'ಕರುಡು ಪುಸ್ತಕ' (Sketch-Book)

ವನ್ನು ತೆಗೆದು ತನ್ನ ಸಹಪ್ರಯಾಣಿಕರ ಸಹಜ ಹಾಗೂ ವ್ಯಂಗ್ಯ ಚಿತ್ರಗಳನ್ನು ಬರೆಯಲಾರಂಭಿಸಿದ. ಹೊತ್ತು ಸುಲಭವಾಗಿ ಕಳೆಯುತ್ತ ಬಂದು ಸುಮಾರು ೨ ಘಂಟೆಯ ವೇಳೆಗೆ ರೈಲು ವಾಲ್ಟೇರ್ ಜಂಕ್ಷನ್ನನ್ನು ಮುಟ್ಟಿತು. ಎಲ್ಲರೊಂದಿಗೆ ಮಾಣಿಯ ಭೋಜನವೂ ತೀರಿತು. ಸ್ಟೇಷನ್ನಿನ ಪುಸ್ತಕ ವಿಕ್ರಯಾಲಯಕ್ಕೆ ಹೋಗಿ ಅಂದಿನ ಪತ್ರಿಕೆಯನ್ನೂ, ಸಣ್ಣ ಕಥೆಗಳ ಒಂದು ಗ್ರಂಥವನ್ನೂ ಕೊಂಡು ತಂದು ಓದುತ್ತಾ ಕುಳಿತ. ರೈಲು ನಿರಾತಂಕವಾಗಿ ತನ್ನ ಮನೋಹರ ಮಂದಗಮನಕ್ಕೆ ಕುಂದು ಬರದಂತೆ ಹೋಗುತ್ತಿತ್ತು. ಮಾಣಿಯ ಮನಸ್ಸು ಒಮ್ಮೆಲೇ ಶಾಂತಿನಿಕೇತನಕ್ಕೆ ಹಾರಿಬಿಡುವುದು. ಕಣ್ಣು ತೆರೆದು ಕನಸಿನ ಪ್ರಪಂಚಕ್ಕೂ ಸಹಜ ಪ್ರಪಂಚಕ್ಕೂ ಇರುವ ವ್ಯತ್ಯಾಸವನ್ನು ಗ್ರಹಿಸಿ, ಆವಸರಪಟ್ಟರೆ ಸುಖವಿಲ್ಲವೆಂದು ಕಥಾಗ್ರಂಥವನ್ನು ಓದುತ್ತಾ ಕುಳಿತ.

ರೈಲು ಬೆಹರ್ಾಂಪುರವನ್ನು ಮುಟ್ಟಲು ರಾತ್ರಿ ೯ ಘಂಟೆಯಾಯಿತು. ಅಲ್ಲಿ ಕೆಲವು ಬಂಗಾಳೀ ಬಾಬುಗಳು ಮಾಣಿಯ ಡಬ್ಬಿಗೆ ನುಗ್ಗಿದರು. ಅವರಲ್ಲಿಯೇ ಒಡಂಬಡಿಕೆಯಾಗಿ ಕೆಲವರು ಪಕ್ಕದ ಗಾಡಿಗೂ, ಕೆಲವರು ಅದೇ ಗಾಡಿಗೂ ನುಗ್ಗಿದರು. ರೈಲು ಹೊರಡಲು ಪ್ರಯಾಣಿಕರು ಹಾಗೂ ಹೀಗೂ ಸವರಿಸಿಕೊಂಡು ಹೊಸಬರಿಗೂ ಕೂಡಲು ಎಡೆಕೊಟ್ಟರು. ಬಂಗಾಳಿ ಬಾಬುಗಳು ಕುಳಿತದ್ದೇ ತಡ, ಅವರಲ್ಲಿ ಇಬ್ಬರಿಗೆ ಭಯಂಕರ ವಾದವೆದ್ದು ಬಿಟ್ಟಿತು. ಒಬ್ಬ ಕುಳ್ಳನೆಯ ಧಡಿಯ ಕೆಟ್ಟು ಹೋದ ಮೋಟಾರು ಹಾರ್ನಿನಂತೆ ಕಿರ್ಲುವುದನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಂಡಿದ್ದ; ಅವನ ಪ್ರತಿವಾದಿ ತೆಳ್ಳಗಿದ್ದರೂ ಎತ್ತರ ಬೆಳೆದಿದ್ದ ಆಳು. ಶಾರೀರದ ಶ್ರುತಿ ೬|| ಮೀರಿ ಹೋಗಿತ್ತು. ರೈಲಿನ 'ಗಡಬಡ — ಗಡಬಡ' ಶ್ರುತಿ ಕೂಡ ಅವನ ನಾದಗಾಂಭೀರ್ಯಕ್ಕೆ ಹೆದರಿ ಎಲ್ಲಿಯೋ ಅಡಗಿ ಹೋಗುತ್ತಿತ್ತು. ಬಾಯಿಗಳ ವಾದ ಮೊದಲು ಮಾಣಿಗೆ ಸ್ವಲ್ಪ ಬೇಸರವನ್ನುಂಟುಮಾಡಿದರೂ ಬರಬರುತ್ತ ಬಹು ಸ್ವಾರಸ್ಯವಾಗಿ ಕಂಡು ಬಂದಿತು. ಇದ್ದಕ್ಕಿದ್ದ ಹಾಗೆಯೇ ಇಬ್ಬರೂ ಹೊಡೆದಾಡುವಂತೆ ಮಾತಿಗಾರಂಭಿಸಿಬಿಡುವರು; ಕ್ರಮ ಕ್ರಮೇಣ ಅದು ಹದಕ್ಕೆ ಬಂದು

ವಿನೋದಗೋಷ್ಠಿಯಾಗಿ ಪರಿಣಮಿಸಿ ಬಿಡುವುದು; ಮತ್ತೆ ಕಾವು ಮೆಲ್ಲ ಮೆಲ್ಲನೆ ಏರಿ ಮೊದಲಿಗಿಂತಲೂ ವಿಪರೀತವಾದ ಹೊಡೆದಾಟಕ್ಕೆ ಇಳಿದು ಬಿಡುವುದು. ಈ ಸ್ನೇಹಸಲ್ಲಾಪದ ಆರೋಹ ಅವರೋಹಗಳನ್ನು ಮೆಲ್ಲನೆ ತನ್ನ ಕರಡು ಪುಸ್ತಕದಲ್ಲಿ ಗುರುತು ಹಾಕಿಕೊಳ್ಳುತ್ತಾ ಮಾಣಿ ತನ್ನಷ್ಟಕ್ಕೆ ತಾನೇ ನಗಲಾರಂಭಿಸಿದ.

ಅನೇಕ ಭಾಷೆ ಮಾತನಾಡುವ, ಅನೇಕ ಬಗೆಯ ಜನವನ್ನು ನೋಡುತ್ತಿದ್ದ ಎಲ್ಲರೂ ತನ್ನ ದೇಶೀಯರು ಎಂದು ಮಾಣಿ ನಂಬದಾದ. ಹೀಗೆ ಬಗೆಬಗೆಯ ಭಾಷೆ ಸಂಪ್ರದಾಯ ನಾಗರಿಕತೆಗಳನ್ನವಲಂಬಿಸುತ್ತ ಹೋದರೆ ನಾವು ಒಂದಾಗುವುದೆಂದಿಗೆ? ಎಂಬ ಯೋಚನೆ ಮೂಡಿತು. ಮರುಕ್ಷಣವೇ 'ದೂರ ಕನ್ನಡನಾಡಿನವನಾಗಿ ಬಂಗಾಳಿ ಕಲಾವಿಭೂತಿಯ ಬಳಿಗೆ ಶಿಷ್ಯವೃತ್ತಿಗೆ ತಾನು ಹೋಗುತ್ತಿರುವುದೇ ಸಾಲದೆ, ನಮ್ಮ ದೇಶವೆಲ್ಲಾ ಒಂದು ಎಂದು ಸ್ಥಿರಪಡಿಸಲಿಕ್ಕೆ?' ಎಂದು ಸಮಾಧಾನ ಗೊಂಡ.

ಅಂದಿನ ರಾತ್ರೆಯ ಗಲಭೆಯಲ್ಲಿ ಯಾರೂ ಒಂದು ಅರಗಳಿಗೆ ಮಲಗಿ ನಿದ್ರಿಸುವ ಹಾಗಿರಲಿಲ್ಲ. ಎಲ್ಲರೂ ಕುಳಿತಲ್ಲಿಯೆ ತೂಕಡಿಸಲಾರಂಭಿಸಿದರು. ಸ್ವಲ್ಪ ಹೊತ್ತಿನೊಳಗಾಗಿ ಡಬ್ಬಿ 'ಅನೇಕ ವಾದ್ಯಗಳ ಸಂಗೀತ ಸಮ್ಮೇಳನ'ವಾಗಿ ಪರಿಣಮಿಸಿತು. ಅದರ ಸಮ್ಮೇಳನ ಒಂದು ಶ್ರುತಿ, ಒಂದು ರಾಗ, ಒಂದು ತಾಳಗಳ ಕಟ್ಟಿಗೆ ಸಿಕ್ಕಿಬಿದ್ದಿದ್ದ ಹಿಂದೀ ಗಾಯನ ವಾಗಿರಲಿಲ್ಲ —ಯೂರೋಪಿನ ಮೇಳ (Orchestra) ವಾಗಿತ್ತು.

ಬೆಳಗಾಗುವ ಹೊತ್ತಿಗೆ ರೂಪಸಾ ಎಂಬ ಸ್ಟೇಷನ್ನಿನಲ್ಲಿ ಗಾಡಿ ಬಂದು ನಿಂತಿತ್ತು. ಮುಖಮಾರ್ಜನವನ್ನು ತೀರಿಸಿ ಅಲ್ಲಿ ದೊರೆಯುತ್ತಿದ್ದ ಟೀ ಎಂಬ ನೀರನ್ನು ಕುಡಿದು ತನ್ನ ಯಾತ್ರೆ ಮುಗಿಯಲು ಇನ್ನು ನಾಲ್ಕೇ ಗಂಟೆಗಳುಳಿದಿವೆಯೆಂಬ ಸಮಧಾನದಿಂದ ಮಾಣಿ ಬಂದು ಕುಳಿತ. ಇನ್ನು ನಾಲ್ಕೇ ಗಂಟೆಗಳು—ಕಲ್ಕತ್ತೆ—ತಾನು ಎಂದಾದರೊಂದು ದಿನ ನೋಡಬೇಕೆಂದು ಹಂಬಲಿಸುತ್ತಿದ್ದ ಕಲ್ಕತ್ತೆ ಇಷ್ಟು ಬೇಗ ಲಭ್ಯವಾಗುವು ದೆಂದು ಕನಸುಮನಸಿನಲ್ಲಿಯೂ ತಿಳಿದಿರಲಿಲ್ಲ. ಆದರೀಗ ಕನಸಲ್ಲ—ಸುಖ

ವಾದ ಸತ್ಯ—ಇನ್ನು ನಾಲ್ಕು ಗಂಟೆಗಳು. ಆ ನಾಲ್ಕೇ ಗಂಟೆಗಳೂ ತೀರುತ್ತ ಬಂದಿದ್ದವು. ಒಂದೊಂದು ನಿಮಿಷ ಒಂದೊಂದು ಯುಗ ದಂತೆ ಜಾರಿತ್ತು. ಕಿಟಕಿಯಿಂದಾಚೆ ತಲೆಯಿಟ್ಟು ತಾನು ಬಂದ ದಾರಿ ಯನ್ನು ನೋಡಿದ—ಕಣ್ಣುಗಳಿಂದ ಹನಿಗಳು ಜಾರಿದವು—'ಮೈಸೂರೇ' ಇದೇ ನಮ್ಮ ಕೊನೆಯ ಸಮಾಗಮವಾಗಬಹುದು; ನಿನ್ನ ಮಗ ಅರ್ಪಿಸುವ ಕಂಬನಿಯ ಕಾಣಿಕೆಯನ್ನು ಸ್ವೀಕರಿಸು' ಎಂದು ಯೋಚಿಸು ತ್ತಿರುವಂತೆ, ಕಣ್ಣಿಗೆ ಕಲ್ಲಿದ್ದಲಿನ ಪುಡಿ ಬೀಳಲು ಒಳಗೆ ಬಂದು ಕುಳಿತು ಕಣ್ಣುಜ್ಜಲಾರಂಭಿಸಿದ.

* * * *

ಹೌರಾ—ಹೌರಾ—ಟ್ಯಾಕ್ಸಿ ಸಾರ್—ಕಾರ್ಲ್ಟನ್ ಹೊಟೇಲ್—ಮಾಡರ್ನ್—ಹಿಂದೂ ಹೊಟೇಲ್—ಚಹಾ—ಹಿಂದೂ ಚಹಾ—ಮುಸ ಲ್ಮಾನೀ ಚಹಾ—ಕೂಲೀ—ಕೂಲೀ—ಕೂಲೀ—ಇನ್ನೂ ನಾನಾ ಬಗೆಯ ಕೂಗುಗಳು. ಗಾಡಿಯಿಂದ ಇಳಿದು ಬೆಕ್ಕಸಬೆರಗಾಗಿ ಆ ಅದ್ಭುತ ನಿಲ್ದಾಣವನ್ನು ನೋಡುತ್ತ ನಿಂತ. ಟಿಕೆಟ್ ಕಲೆಕ್ಟರ್ ಬಂದು ಟಿಕೆಟನ್ನು ಸಂಗ್ರಹಿಸಿಕೊಂಡು 'ಮುಂದಕ್ಕೆ ನಡೆಯಿರಿ ಸಾರ್' ಎಂದು ಸಂದೇಶ ಕೊಟ್ಟಾಗಲೇ ಮಾಣಿಗೆ ಎಚ್ಚರ, ತಾನು ಕಲ್ಕತ್ತೆಗೇ ಬಂದಿರುವೆ ನೆಂದು. ಗಾಡಿಯನ್ನು ಬಿಟ್ಟು ಎದುರಿಗಿದ್ದ ಕಂಬದ ಬಳಿಗೆ ಹೋಗಿ, 'ಎಲ್ಲಿಗೆ ಹೋಗಲಿ' ಎಂದು ಯೋಚಿಸುತ್ತ ನಿಂತ. ಅಷ್ಟರಲ್ಲಿ ಇಬ್ಬರು ಹಿರಿಯ ವಿದ್ಯಾರ್ಥಿಗಳು ಮಾಣಿಯ ಬಳಿಗೆ ಬಂದು ಇಂಗ್ಲೀಷಿನಲ್ಲಿ

"ಮದರಾಸಿನಿಂದ ಬಂದಿರಾ ಸಾರ್?"

"ಅಹುದು"

"ತಮ್ಮ ಹೆಸರು ಮಾಣಿಯೆ ?"

"ಅಹುದು....ಆದರೆ ತಮಗೆ ಹೇಗೆ ಗೊತ್ತಾಯಿತು ?"

ಅವರಲ್ಲಿ ಒಬ್ಬ ಕಿಸೆಯಿಂದ ಒಂದು ತಂತೀ ವರ್ತಮಾನದ ಲಕೋಟೆ ಯನ್ನು ತೆಗೆದು ಮಾಣಿಯ ಕೈಗಿತ್ತ.

"ರಾಮಚಂದ್ರನಿಗೆ. ಮಾಣಿ ಎಂಬ ಗೆಳೆಯ ಈ ಗಾಡಿಯಲ್ಲಿ

ಕಲ್ಕತ್ತೆಗೆ ಬಂದು ಮುಂದೆ ಬೋಲ್ಪುರಕ್ಕೆ ಪ್ರಯಾಣ ಬೆಳಸುತ್ತಾರೆ. ಅವರ ಅನುಕೂಲಕ್ಕೆ ತಕ್ಕ ವ್ಯವಸ್ಥೆ ಮಾಡುವುದು ನಿನ್ನ ಕಾರ್ಯಭಾರ.

—ಇಂತಿ ನಿನ್ನ ಆತ್ಮೀಯ **ಶರ್ಮ,**

ಹೊಸ ಪರಿಚಯದ ತೆರೆ ಜಾರಿತು. ಮಾಣಿ ಶರ್ಮನ ಪ್ರೇಮವನ್ನು ಹೃತ್ಪೂರ್ವಕವಾಗಿ ಮೆಚ್ಚಿ ಅಭಿನಂದಿಸುತ್ತಾ ರಾಮಚಂದ್ರ ಮತ್ತು ಅವನ ಗೆಳೆಯ ಶ್ರೀಕಂಠಯ್ಯನ ಪರಿಚಯ ಮಾಡಿಕೊಳ್ಳುತ್ತಾ ಮುಂದೆ ನಡೆದ. ಕನ್ನಡ ನುಡಿಯನ್ನು ಕೇಳಿ ೧॥ ದಿವಸಗಳ ಮೇಲೆ ಆಗಿ ಹೋಗಿತ್ತು. ಕನ್ನಡವನ್ನಾಡುವ ಇಬ್ಬರು ಗೆಳೆಯರು ದೊರೆತದ್ದರಿಂದ ಮಾಣಿಗೆ ಪ್ರಯಾಣದ ಆಯಾಸವೆಲ್ಲಾ ಮುಚ್ಚಿಹೋಯಿತು. ಮಾಣಿ ಬಂಗಾಳಕ್ಕೆ ಬಂದಿರುವ ಉದ್ದೇಶವನ್ನರಿತು ತಾವು ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಎಂ. ಎಸ್. ಸಿ. ಪರೀಕ್ಷೆಗೆ ಕೂಡಲು ಬಂದಿರುವುದಾಗಿ ತಿಳಿಸಿದರು. ಬೋಲ್ಪುರಕ್ಕೆ ಹೋಗುವ ರೈಲು ರಾತ್ರಿ ೮॥ ಗಂಟೆಗೆ ಹೊರಡುತ್ತಿದ್ದುದರಿಂದ ಅಲ್ಲಿಯವರೆಗೆ ಊರನ್ನು ನೋಡಿ ಬರಲು ಅವಕಾಶವಿದೆಯೆಂದು ಮಾಣಿಗೆ ತಿಳಿಸಿದರು. ತಾನು ಬರುವುದನ್ನು ಶಾಂತಿನಿಕೇತನದ ಕಾರ್ಯದರ್ಶಿಗಳಿಗೆ ತಿಳಿಸುವಂತೆ ಬಿನ್ನವಿಸಲು ಗೆಳೆಯರು ಅವರ ವಿಳಾಸಕ್ಕೆ ಒಂದು ತಂತಿಯನ್ನಿತ್ತು ತಮ್ಮ ಕೊಠಡಿಯಿದ್ದ ಭವಾನಿಪುರಕ್ಕೆ ಮಾಣಿಯನ್ನು ಕರೆದೊಯ್ದರು.

ಅಲ್ಲಿ ಸ್ನಾನ ಭೋಜನಾದಿಗಳನ್ನು ತೀರಿಸಿಕೊಂಡು ಮಲ್ಲಿಕ್ ಅರಮನೆ, ಕಲ್ಕತ್ತೆಯ ಕಲಾಶಾಲೆ, ಕಾಳೀಘಟ್ಟ, ಮುಖ್ಯಮುಖ್ಯವಾದ ಬಡಾವಣೆಗಳನ್ನು ನೋಡಿ ಬಂದರು. ಏನು ಭವನಗಳು – ಏನು ಉದ್ಯಾನಗಳು – ಏನು ಮೋಟಾರುಗಳ ಓಡಾಟ ಎಂದು ನೆನೆಯುತ್ತಾ ಬರುತ್ತಿರುವಾಗ ಒಂದು ಅಂಗಡಿಯ ಮುಂದೆ ನಿಂತಿದ್ದ ಭಿಕ್ಷುಕರನ್ನು ಯಜಮಾನನ ಕಡೆಯ ಆಳುಗಳು ಹೊಡೆದಟ್ಟುತ್ತಿದ್ದುದನ್ನು ನೋಡಿದ. 'ಸಿರಿಯಿದ್ದಲ್ಲಿ ಕ್ರೌರ್ಯವಿರಲೇಬೇಕಲ್ಲವೇ?' ಎಂದು ನಿಟ್ಟುಸಿರುಬಿಡುತ್ತಾ ಗೆಳೆಯರೊಂದಿಗೆ ಭವಾನಿಪುರಕ್ಕೆ ಹೊರಟ.

ರಾಮಚಂದ್ರ ಮತ್ತು ಶ್ರೀಕಂಠಯ್ಯ ಇಬ್ಬರೂ ಬೆಂಗಳೂರಿನವರೆಂದರಿತ ಮೇಲಂತೂ ಮಾಣಿಯ ಹಿಗ್ಗಿಗೆ ಮಿತಿಯಿಲ್ಲದಾಯಿತು. ಪರಸ್ಪರ

ಬಳಿಕೆಯು ಅನೇಕ ಮಾತುಗಳಾದವು. ಮೂರ್ತಿ ಶ್ರೀಕಂಠಯ್ಯನ ಒಂದು ಕಾಲದ ಸಹಾಧ್ಯಾಯಿಯಾಗಿದ್ದನೆಂದು ಗೊತ್ತಾದ ಮೇಲಂತೂ ಅನ್ಯೋನ್ಯತೆ ಬೆಳೆಯಿತು. ರೈಲಿಗೆ ಹೊತ್ತಾಗುತ್ತ ಬಂದಿರಲು ಮೂವರೂ ನಿಲ್ದಾಣದ ಕಡೆ ನಡೆದರು.

ಬೋಲ್ಪುರಕ್ಕೆ ಟಿಕೀಟನ್ನು ಕೊಂಡು ಮಾಣಿ ಗಾಡಿ ಹತ್ತಿದ. ಬೋಲ್ಪುರವಲ್ಲಿಯೂ ಹೀಗೆಯೇ ಕನ್ನಡ ಮಿತ್ರರು ದೊರೆತರೆ ತನ್ನ ಜೀವನ ಎಷ್ಟು ಸುಗಮವಾಗುವುದು ಎಂದು ಯೋಚಿಸಲಾರಂಭಿಸಿದ. ಉಳಿದಿರುವ ಕೆಲವು ನಿಮಿಷಗಳನ್ನು ಹೇಗೆ ಕಳೆಯಬೇಕೆಂದು ಎಲ್ಲರಿಗೂ ಸಮಸ್ಯೆಯಾಯಿತು. ಮಾಣಿಯ ದೃಷ್ಟಿ ಗಡಿಯಾರದ ಕಡೆಗೆ; ರಾಮಚಂದ್ರನ ದೃಷ್ಟಿ ಗಾಡಿಯಲ್ಲಿ ಅರೆಮಿನುಗುತ್ತಿದ್ದ ದೀಪದ ಕಡೆಗೆ; ಶ್ರೀಕಂಠಯ್ಯನ ದೃಷ್ಟಿ ಒಮ್ಮೆ ಅತ್ತ ಒಮ್ಮೆ ಇತ್ತ. ಕೊನೆಗೆ ಈ ವ್ಯರ್ಥಕಾಲಹರಣ ಸುಖವಿಲ್ಲವೆಂದು ರಾಮಚಂದ್ರ

"ಆಗಾಗ್ಗೆ ಪುರುಸೊತ್ತಾದಾಗ ಕಲ್ಕತ್ತೆಗೆ ಬರುತ್ತಿರಿ" ಎಂದ.

"ಖಂಡಿತವಾಗಿಯೂ—ಉಳಿದಿರುವುದನ್ನೆಲ್ಲಾ ತೋರಿಸುವಿರಷ್ಟೆ."

"ಅವಶ್ಯಕವಾಗಿ."

"ದಕ್ಷಿಣೇಶ್ವರಕ್ಕೆ ಒಮ್ಮೆ ಹೋಗಿಬರಬೇಕು. ಬಂಗಾಳೀ ನಾಟಕಗಳು ಕೆಲವನ್ನಾದರೂ ನೋಡಬೇಕು. ಬಂಗಾಳೀ ಸಂಗೀತ ಕೇಳಬೇಕು."

"ಅವಶ್ಯಕವಾಗಿ. ಇದು ಬಹಳ ಮುಂದುವರಿದ ಜನ. ಇವರ ಸ್ವಾಭಿಮಾನ, ಆತ್ಮಗೌರವ ಅನುಕರಣೀಯವಾಗಿವೆ" ಎಂದು ಶ್ರೀಕಂಠಯ್ಯ ಜೋಡಿಸಿದ. ಗಾರ್ಡನ ಸೀಟಿ;—ರೈಲು ಮೆಲ್ಲನೆ ಮುಂದಕ್ಕೆ ನಡೆಯಿತು. ಮಾಣಿ ಗೆಳೆಯರಿದ್ದ ಕಡೆಯೇ ನೋಡುತ್ತ ಕೈಮುಗಿದ. ಶರ್ಮನ ನೆನಪೂ, ತನ್ನ ಮೂವರು ಬಂಧುಗಳ ನೆನಪೂ ಮೂಡಿ ಕಣ್ಣಲ್ಲಿ ನೀರೂರಿತು; ಏನನ್ನೋ ಚಿಂತಿಸುತ್ತ ಕುಳಿತುಬಿಟ್ಟ.

ಬೋಲ್ಪುರ ನಿಲ್ದಾಣ ಬಂದಿತೆಂದು ಪಕ್ಕದಲ್ಲಿದ್ದವರು ಎಚ್ಚರಿಸಿದುದೇ ಎಚ್ಚರ. ಅಲ್ಲಿಯವರೆಗೆ ತನ್ಮಯತೆಯಿಂದ ಮಾಣಿಯ ಹೊತ್ತು ಸುಲಭವಾಗಿ ಕಳೆದು ಹೋಗಿತ್ತು. ಮಧ್ಯರಾತ್ರಿ ಸಮಯ....ಇಳಿದು ತನ್ನನ್ನು ಕರೆದೊಯ್ಯಲು ಯಾರಾದರೂ ಬಂದಿರುವರೇ ಎಂದು ಅತ್ತಿತ್ತ ನೋಡತೊಡ

ಗಿದ. ಸ್ವಲ್ಪ ಹೊತ್ತಿನಲ್ಲಿಯೇ ಇಬ್ಬರು ಬಂಗಾಳೀ ತರುಣರು ಮಾಣಿಯ ಬಳಿಗೆ ಬಂದು ಹರಕು ಮುರುಕು ಇಂಗ್ಲಿಷಿನಲ್ಲಿ ಮಾತನಾಡಿಸಿ ಅವನನ್ನು ಕರೆದೊಯ್ದರು. ನಿಲ್ದಾಣದ ಹೊರಭಾಗದಲ್ಲಿ ಒಂದು ಎತ್ತಿನ ಗಾಡಿಯೂ ಸಿದ್ಧವಾಗಿತ್ತು. ಶಾಂತಿನಿಕೇತನ ಅಲ್ಲಿಂದ ಒಂದು ಒಂದೂವರೆ ಮೈಲಿ ಮಾತ್ರವೇ ಇರುವುದೆಂದು ತಿಳಿದಮೇಲೆ ನಡೆಯಲು ನಿಶ್ಚಯಿಸಿ ಅವರ ಜತೆಯಲ್ಲಿಯೇ ಹೊರಟ.

'ಅತಿಥಿಮಂದಿರ'ದಲ್ಲಿ ಮಾಣಿಗೆ ಬಿಡಾರವಾಯಿತು. ಭೋಜನ ತೀರಿದೆಯೆಂದು ಹೇಳಲು ವಿದ್ಯಾರ್ಥಿಗಳು ಕುಡಿಯಲು ಹಾಲು ತಂದು ಕೊಟ್ಟು, ಬೆಳಿಗ್ಗೆ ಕಾಣುವುದಾಗಿ ತಿಳಿಸಿ ತಾವು ಮಲಗಲು ಹೊರಟು ಹೋದರು. ಮಾಣಿ ತನ್ನ ಹಾಸಿಗೆಯ ಗಂಟನ್ನು ಬಿಚ್ಚಿ ಮಂಚದ ಮೇಲೆ ಹಾಸಿ ಸಿದ್ಧವಾಗಿದ್ದ ಸುಪ್ಪತ್ತಿಗೆಯ ಮೇಲೆ ಅದನ್ನು ಹಾಸಿ ಹಾಲನ್ನು ಸೇವಿಸುತ್ತಾ ಕುಳಿತ. ವಿಶಾಲವಾದ ಕೋಣೆ. ಅಂದವಾಗಿ ಅಲಂಕೃತವಾಗಿದೆ. ಇಬ್ಬರು ಆರಾಮವಾಗಿರುವಂತೆ ಎರಡು ಮಂಚಗಳು, ಎರಡು ಮೇಜುಗಳು, ನಾಲ್ಕಾರು ಕುರ್ಜಿಗಳು, ಒಂದು ನಿಲುಗನ್ನಡಿ, ಮೂಲೆಯಲ್ಲಿ ಒಂದು ನೀರಿನ ಬಾನಿ.

ಶಾಂತಿನಿಕೇತನ—ಶಾಂತಿನಿಕೇತನ—ಶಾಂತಿನಿಕೇತನ ಎಂದು ತನ್ನಲ್ಲಿ ತಾನು ಅದೇ ಮಾತನ್ನು ಆಡಿಕೊಂಡ. ನಿಶ್ಶಬ್ದವಾದ ಪ್ರಶಾಂತವಾದ ಆ ವಾತಾವರಣದಲ್ಲಿ 'ಶಾಂತಿನಿಕೇತನ'ವೆಂಬ ಸಪ್ತಾಕ್ಷರ ಸಪ್ತಸ್ವರಗಳ ಗುಂಜಾರವದಂತೆ ಅವನಿಗೆ ಕೇಳಬರುತ್ತಿತ್ತು. ಹೊರಗೊಮ್ಮೆ ಹೋಗಿ ನೋಡಿಬರುವ ಎನಿಸಿತು. ಎದ್ದು ಹೊರಗಿನ ಜಗುಲಿಯ ಮೇಲೆ ನಿಂತು ತನ್ನ ಕನಸಿನ ಕಲಾಶಾಲೆಯನ್ನು ಕಂಡ. ಎತ್ತರವಾದ ಮರಗಳ ಆಸರೆಯಲ್ಲಿ ತಲೆಯೆತ್ತಿ ನಿಂತಿದ್ದ ವಿದ್ಯಾರ್ಥಿಭವನಗಳು; ಅವುಗಳೆದುರು ಕಳೆಗೂಡಿ ಕಂಗೊಳಿಸುತ್ತಿದ್ದ 'ಕಲಾಭವನ'—ಗ್ರಂಥ ಭಾಂಡಾರ, ಮಾಣಿಗೆ ತನ್ನ ಕಲ್ಪನಾಸಾಮ್ರಾಜ್ಯ ಮೂರ್ತಿಗೊಂಡಿತೋ ಎಂಬಂತೆ ಭಾಸವಾದವು. ಕಣ್ಣೆಳೆಯುತ್ತ ಬಂದಿರಲು ಸುಪ್ಪತ್ತಿಗೆ ಸೇರಿದ, ಅಂದು ಅವನು ನಿದ್ರಿಸಿದಂತೆ ಮತ್ತೆಂದೂ ನಿದ್ರಿಸಿರಲಿಲ್ಲ. ಮುಂಜಾನೆ ಅದೇ ಬಂಗಾಳೀ ವಿದ್ಯಾರ್ಥಿಗಳು ಬಂದು ಎಚ್ಚರಗೊಳಿಸಿ ಸ್ನಾನಾಗಾರಕ್ಕೆ ಕರೆದೊಯ್ಯುವವರೆಗೂ ಎಚ್ಚರವೇ ಇಲ್ಲ.

೮

ಕಲಾಶಾಲೆಯ ಕೆಲಸ ಕಾರ್ಯಗಳು ಆರಂಭವಾಗಿದ್ದವು. ವಿಶಾಲವಾದ ಸುಂದರವಾದ ತೊಟ್ಟಿ. ಅಲ್ಲಲ್ಲಿ ಜಯಪುರ, ಬಿದರ್‌ಗಳ ಕಂಚಿನ ಕೆತ್ತನೆಯ ಪಾತ್ರೆಗಳು ಇಡಲ್ಪಟ್ಟಿವೆ. ತೊಟ್ಟಿಯ ಒಂದು ಗೋಡೆಯ ಮಧ್ಯಭಾಗದಲ್ಲಿ ಐದಾರು ಅಡಿ ಇರುವ ಸುಂದರವಾದ ನಟರಾಜನ ವಿಗ್ರಹ. ಗೋಡೆಗಳ ಮೇಲೆ ಕಾಶ್ಮೀರ್, ಸೂರತ್ ಮತ್ತು ಲೂದಿಯಾನದ ಬಗೆಬಗೆಯ ಚಿತ್ರವೇಶ್ಮಗಳು ತೂಗಹಾಕಲ್ಪಟ್ಟಿವೆ. ಅಲ್ಲಲ್ಲಿ ಒಂದೊಂದು ಸುಂದರವಾದ ಜಲಚಿತ್ರ (Watercolour Painting)· ನಟರಾಜನ ಮೂರ್ತಿಗೆದುರಾಗಿ ಎತ್ತರ ಮಂಟಪವೊಂದರಲ್ಲಿ ಬಂಗಾಳಚಿತ್ರಕಲಾ ಸಂಪ್ರದಾಯದ ಆಚಾರ್ಯ ಪುರುಷರಾದ ಅವನೀಂದ್ರನಾಥ ಠಾಕೂರರ ಅಮೃತ ಶಿಲಾಶಿಲ್ಪ. ವಿದ್ಯಾರ್ಥಿಗಳು ಅಂಕೆ ಶಿಕ್ಷೆಗಳ ಅಧೀನಕ್ಕೊಳಪಡದೆ ತಮಗೆ ಕತ್ತಲೆ—ಬೆಳಕು ಹಿತವೆಂದು ಕಂಡ ಎಡೆಯಲ್ಲಿ ಕುಳಿತು ಚಿತ್ರಗಳನ್ನು ಬಿಡಿಸುತ್ತಿದ್ದರು. ಅವರ ಮಧ್ಯೆ ಅಧ್ಯಾಪಕರೊಬ್ಬರು ಕುಳಿತೂ ತಾವೂ ಒಂದು ವೇಶ್ಮಚಿತ್ರ ಬಿಡಿಸುತ್ತಿದ್ದರು.

ಮಾಣಿಯನ್ನು ಶಾಂತಿನಿಕೇತನಕ್ಕೆ ಕರೆದೊಯ್ಯಲು ಬಂದಿದ್ದ ಒಬ್ಬ ವಿದ್ಯಾರ್ಥಿ ಕಲಾಭವನಕ್ಕೆ ಸೇರಿದವನಾಗಿದ್ದ. ಇನ್ನೊಬ್ಬ ಅಲ್ಲಿ ಸಂಗೀತ ಕಲೆಯನ್ನಭ್ಯಸಿಸುತ್ತಿದ್ದ. ಒಂದೇ ಕಲೆಯ ವಿಶ್ವಾಸ ನೀಲರಂಜನನನ್ನು ಮಾಣಿಯ ಪ್ರೇಮಕ್ಕೆ ಗಂಟು ಹಾಕಿತ್ತು. ತನ್ನ ಕೃತಿಗಳ ವಹಿಯನ್ನು ಹಿಡಿದು ಮಾಣಿ ನೀಲರಂಜನನೊಂದಿಗೆ ಕಲಾಭವನಕ್ಕೆ ಬಂದು ಅಲ್ಲಿ ಕಣ್ಮನಗಳನ್ನು ತುಂಬುತ್ತಿದ್ದ ಚಿತ್ರಕೃತಿಗಳನ್ನು ನೋಡುತ್ತ ಹೊರಗಣ ಮೊಗಸಾಲೆಯಲ್ಲಿ ನಿಂತಿದ್ದ.

ಸ್ವಲ್ಪಹೊತ್ತು ಹಾಗೆಯೇ ಕಳೆಯಿತು. ಒಳಗೆ ಹೋದ ನೀಲರಂಜನ ಹೊರಗೆ ಬರುವ ಸುಳಿವೇ ಕಾಣಬರಲಿಲ್ಲ. ಮಾಣಿ ಅಶಾಂತಿಯಿಂದ ಒಂದೆರಡುಬಾರಿ ಇಣಿಕಿ ನೋಡಿದ. ನೀಲರಂಜನ ಅಧ್ಯಾಪಕರೊಂದಿಗೆ ಮಾತನಾಡುತ್ತಿದ್ದಂತಿತ್ತು. ಮತ್ತೆ ಕೆಲವು ನಿಮಿಷಗಳು ಕಳೆಯಲು ನೀಲರಂಜ ಕಪ್ಪನೆಯ ಸುದೃಢಗಾತ್ರದ ಒಬ್ಬ ಅಧ್ಯಾಪಕರೊಂದಿಗೆ ಬಂದು ಎದುರಿಗೆ ನಿಂತು ಮಾಣಿಯನ್ನು ಉದ್ದೇಶಿಸಿ ಬಂಗಾಳಿಯಲ್ಲಿ ಏನೋ

ನುಡಿದ. ಅಧ್ಯಾಪಕರು ಒಮ್ಮೆ ತಲೆಯಿಂದ ಕಾಲಿನವರೆಗೂ ಮಾಣಿಯನ್ನು ನೋಡಿ ಅಕ್ಕರೆಯಿಂದ ತಮ್ಮ ತುಂಡು ತುಂಡು ಇಂಗ್ಲೀಷಿನಲ್ಲಿ

"ನೀನು ಇಲ್ಲಿ ಕಲೆಯನ್ನು ಕಲಿಯಬೇಕೆಂದು ಬಂದೆಯಾ ಮಗು ?"

ಎಂದು ಪ್ರಶ್ನಿಸಿದರು.

ಮಾಣಿಗೆ ಅಧ್ಯಾಪಕರ ಪರಿಚಯವಿಲ್ಲ. ಅವರ ಸರಳ ಸೌಜನ್ಯ, ಮಾತಿನ ಮಾರ್ದವ ಆಗಲೇ ಅವನ ಅಂತಃಕರಣವನ್ನು ಹೊಕ್ಕಿತ್ತು.

"ಹೌದು ಮಹಾಶಯರೇ, ಬೆಂಗಳೂರಿನಿಂದ ಬಂದಿದ್ದೇನೆ."

"ಮೊದಲೇ ಪತ್ರ ಹಾಕಿದ್ದೆಯಾಪ್ಪ ? ಕಾರ್ಯದರ್ಶಿಗಳು ಏನು ಉತ್ತರವಿತ್ತರು ?"

ಮಾಣಿ, ಕಾರ್ಯದರ್ಶಿಗಳು 'ಆಗಬಹುದೆಂದು' ಬರೆದಿದ್ದ ಪತ್ರ ಅವರ ಕೈಗಿತ್ತ. ಅದನ್ನು ನೋಡುತ್ತಾ ಅಧ್ಯಾಪಕರು ಮಾಣಿ, ನೀಲರಂಜನರನ್ನು ಕೂಡಲು ಹೇಳಿ ತಾವೂ ಕುಳಿತರು. ಮಾಣಿ ಮೆಲ್ಲನೆ ನೀಲರಂಜನನನ್ನು ಕುರಿತು ಸಂಜ್ಞೆಯಿಂದ ಇವರು ಯಾರು ಎಂದು ಕೇಳಲು ಅವನು ಒಂದು ಚೂರು ಕಾಗದದ ಮೇಲೆ ನಂದಲಾಲಜಿಯವರು ಎಂದು ಬರೆದು ತೋರಿಸಿದ. ಅಧ್ಯಾಪಕರು ಕಾಗದವನ್ನು ಮುಗಿಸಿ ಕತ್ತೆತ್ತುವ ಹೊತ್ತಿಗೆ ಮಾಣಿಯ ಕಣ್ಣಲ್ಲಿ ಹನಿ ತುಂಬಿರುವುದನ್ನು ಕಂಡು ಅನುಕಂಪ ದಿಂದ

"ಏಕೆ ತಮ್ಮಾ ದುಃಖಿಸುತ್ತಿರುವೆ. ಊರುಬಿಟ್ಟು ಬಂದೆನೆಂದು ದುಃಖವೋ ?"

"ಇಲ್ಲ ಮಹಾಶಯಾ, ನಾನು ಯಾವ ವ್ಯಕ್ತಿಯನ್ನು ನಿಜವಾದ ಗುರು ವೆಂದು ಭಾವಿಸಿದೆನೋ ಆ ಗುರುದೇವನ ಸನ್ನಿಧಿಯಲ್ಲೇ ಇರುವೆನಲ್ಲಾ ಎಂದು ಹಿಗ್ಗುತ್ತಿರುವೆ. ಬಡವನನ್ನು ಉದ್ಧರಿಸಬೇಕು" ಎಂದು ನಂದಲಾಲರ ಎರಡು ಪಾದಗಳನ್ನು ಹಿಡಿದು ನಮಸ್ಕರಿಸಿದ. ಗುರುವಿನ ಕಣ್ಣುಗಳಲ್ಲಿಯೂ ನೀರೂರಿತು. ಮಾಣಿ ಮೈದಡವುತ್ತಾ

"ನಿನ್ನ ಗುರು ದೊಡ್ಡವನೋ ಚಿಕ್ಕವನೋ—ಅಂತೂ ಮಹಾಭಾಗ್ಯ ಶಾಲಿ. ಆಂಧ್ರ, ಕರ್ಣಾಟಕ, ಮಹಾರಾಷ್ಟ್ರ, ಕೊಲಂಬೊ ಮೊದಲಾದ ಬಹುದೂರ ದೇಶಗಳಿಂದ ಇಲ್ಲಿಗೆ ಬರುತ್ತಿರುವಿರಿ. ನಿಮ್ಮಲ್ಲಿಯೇ ಇರುವ

ಕಲೆಯ ಪ್ರಚೋದನವನ್ನು ಹೊಂದಿ ಮರಳಿ ನಿಮ್ಮ ನಿಮ್ಮ ಊರುಗಳನ್ನು ಸೇರುವಿರಿ. ಅಂತೂ, ನಮ್ಮ ನಾಡಿನ ಬಾಂಧವ್ಯ ಹೀಗಾದರೂ ಬೆಳೆಯು ತ್ತಿದೆಯಲ್ಲಾ ಎಂದು ನನಗೆ ಸಂತೋಷ. ಆವಶ್ಯಕವಾಗಿ—ನಿರ್ವಂಚನೆ ಯಿಂದ—ನನಗೆ ಬರುವುದನ್ನು ಕಲಿಸಿಕೊಡುವೆ" ಎಂದು ಹೇಳಿದರು. ದೊಡ್ಡ ಹೃದಯದಿಂದ ಬಂದ ದೊಡ್ಡ ಮಾತುಗಳನ್ನು ಕೇಳಿ ಮಾಣಿಯ ಅಧೈರ್ಯ ಮಾಯವಾಯಿತು. ನಂಬದ ತನ್ನ ಕಣ್ಣುಗಳ ಎದುರಿಗಿರುವ ನಿರಾಡಂಬರ ಮೂರ್ತಿಯೇ ಚಿತ್ರಕಲೆಯಲ್ಲಿ ಕ್ರಾಂತಿಯನ್ನುಂಟುಮಾಡಿದ ಮಹಾ ಪುರುಷನೇ ಎಂದು ಅಚ್ಚರಿಗೊಂಡ.

ಮತ್ತೆ ನಂದಾಲಾಲರು

"ಚಿತ್ರಕಲೆಯ ಸ್ವಲ್ಪ ಪರಿಚಯವುಂಟೆಂದು ಬರೆದುಕೊಂಡಿರುವೆ. ಕೃತಿಗಳನ್ನೇನಾದರೂ ತಂದಿರುವೆಯಾ ?"

"ತಂದಿರುವೆ, ಆದರೆ ಅವು...."

"ಚಿಂತೆಯಿಲ್ಲ ಕೊಡು. ಯಾರೂ ಆರಂಭದಲ್ಲಿ ಅತ್ಯುತ್ತಮ ಕೃತಿ ಗಳನ್ನು ಮಾಡುವುದಿಲ್ಲ. ಕಲೆ ಅನೇಕರನ್ನು ಕರೆಯುತ್ತದೆ; ಆದರೆ ಕೆಲವರನ್ನು ಮಾತ್ರ ಆರಿಸಿಕೊಳ್ಳುತ್ತದೆ" ಎಂದು ಮಾಣಿಯ ಒಂದೊಂದು ಚಿತ್ರವನ್ನೂ ಪರೀಕ್ಷಿಸುತ್ತ ಹೊರಟರು. ರೈಲಿನಲ್ಲಿ ಅವನು ಮಾಡಿದ್ದ ಚಿತ್ರಗಳನ್ನು ನೋಡಿ ಆನಂದಿಸಿ ಗಹಗಹಿಸಿ ನಕ್ಕರು. ಆನಂದಪತ್ರಿಕೆಯಲ್ಲಿ ಪ್ರಕಟವಾದ 'ಸಂದೇಶ'ವನ್ನು ನೋಡುತ್ತಾ ತನ್ಮಯರಾಗಿ ಹೋದರು. ಬಗೆಬಗೆಯಾಗಿ ಅದರ ಮೇಲೆ ಬೆಳಕು ಬೀಳುವಂತೆ ಬೇರೆ ಬೇರೆ ಸ್ಥಳಗಳಲ್ಲಿ ಅದನ್ನು ಇಟ್ಟು ಬಹಳ ಹೊತ್ತು ನೋಡುತ್ತ ನೋಡುತ್ತಾ ಮೆಲ್ಲನೆ ಕನ್ನಡಕ ತೆಗೆದು ಕಣ್ಣನ್ನೊಮ್ಮೆ ಒರಸಿಕೊಂಡರು. ಕನ್ನಡಕ ಮತ್ತೆ ಧರಿಸಿ ಮಾಣಿಯನ್ನು ಆದರದಿಂದ ನೇವರಿಸಿ

"ತಮ್ಮಾ, ಇದು ಅದ್ಭುತ ಚಿತ್ರ. ನೀನು ಹುಟ್ಟು ಕಲಾವಿದ. ಅಷ್ಟುದೂರದಿಂದ ಬಂದಿರುವ ನಿನಗೆ ನಾನು ಹೇಳಿಕೊಡತಕ್ಕದ್ದೇನಿದೆ ? ನಿನ್ನನ್ನು ಸಂತೋಷವಾಗಿ—ಹೆಮ್ಮೆಯಿಂದ ಶಿಷ್ಯನೆಂದು ಅಂಗೀಕರಿಸುತ್ತೇನೆ. ಆದರೆ ಒಂದು ಮಾತು...."

"ದಯಮಾಡಿ ತಿಳಿಸಬೇಕು."

"ಇಲ್ಲಿನ ವ್ಯಾಸಂಗ ಐದು ವರ್ಷವಾಗಬೇಕು. ನೀನು ಈಗಾಗಲೇ ಎರಡು ತರಗತಿಗಳ ಪಾಠಕ್ಕೆ ಮೀರಿದ ವಿದ್ಯೆಯನ್ನರಿತಿರುವೆ—ನಿನ್ನನ್ನು ಮೂರನೆಯ ತರಗತಿಗೆ ಸೇರಿಸುತ್ತೇನೆ. ನೀನು ಮೂರು ವರ್ಷಗಳಾದರೂ ನನ್ನಲ್ಲಿ ಶ್ರದ್ಧೆಯಿಂದ ಕಲಿಯಬೇಕು ಆಗುತ್ತದೆಯೋ ?"

"ಆಗುತ್ತದೆ ಮಹಾಶಯ ?"

"ಊಟ ಉಪಚಾರಗಳಿಗೇನು ಮಾಡುವೆ."

"ಕೈಯಲ್ಲಿ ನೂರು ರೂಪಾಯಗಳಷ್ಟು ಹಣವಿದೆ. ಇದು ೨–೩ ತಿಂಗಳಿಗೆ ಸಾಕಾಗಬಹುದು. ಅಷ್ಟರಲ್ಲಿ ದುಡಿಯುವುದಕ್ಕೆ ಕಲಿಯಬೇಕೆಂದಿದ್ದೇನೆ."

"ಆಗಲಿ. ಮಿತವಾಗಿ ವ್ಯಯಮಾಡು. ಒಂದೆರಡು ತಿಂಗಳಲ್ಲಿ ನಿನಗೊಂದು ಕಾಲಕ್ಷೇಪ ದೊರಕುವಂತೆ ಮಾಡುತ್ತೇನೆ" ಎಂದು ಹೇಳಿ ನಗುತ್ತಾ

"ಬಂಗಾಳ ರಸಗುಲ್ಲಕ್ಕೆ ಬಹಳ ಪ್ರಖ್ಯಾತಿ....ರುಚಿಯೂ ಹಾಗೆಯೇ.... ಅದಕ್ಕಾಗಿ ಬಹಳ ಹಣ ವ್ಯಯ ಮಾಡೀಯೇ" ಎಂದು ಎಚ್ಚರಿಸುತ್ತಾ

"ರಸಗುಲ್ಲ ಬೇಕಾದರೆ ನಮ್ಮ ಮನೆಗೆ ಬಂದುಬಿಡು. ನನಗೂ ಅದರ ಮೇಲೆ ತುಂಬ ಇಷ್ಟ?" ಎಂದು ಹೇಳಿ ನಗುನಗುತ್ತಾ ತಮ್ಮ ಶಾಲೆಯ ಒಳಗೆ ತೆರಳಿದರು. ಗುರು ತನ್ನ ಸ್ಥಾನದಲ್ಲಿ ಕುಳಿತಮೇಲೆ ನಿಂತಲ್ಲಿಂದಲೇ ಒಮ್ಮೆ ನಮಸ್ಕರಿಸಿ ನೀಲರಂಜನನೊಂದಿಗೆ ಹಿಂದಿರುಗಿದ.

ಶಾಲೆಗೆ ಸೇರುವ ಮೊದಲು ಆಗುವ ಪ್ರಕರಣಗಳನ್ನು ಮುಗಿಸುವುದರಲ್ಲಿಯೇ ಅಂದಿನ ಹೊತ್ತು ಕಳೆದು ಹೋಯಿತು. ನೀಲರಂಜನನ ಕೋಣೆಯೇ ಮಾಣಿಯದೂ ಆಯಿತು. ವಿದ್ಯಾರ್ಥಿಭವನದಲ್ಲಿಯೇ ಊಟ ಮಾಡುವುದು ನಿಶ್ಚಯವಾಯಿತು. ಮಾಣಿ ತನ್ನ ಸಾಮಾನುಗಳನ್ನು ಓರಣವಾಗಿಟ್ಟುಕೊಂಡು, ಮಾರನೆಯ ದಿವಸದಿಂದ ಅಭ್ಯಾಸಕ್ಕೆ ಆರಂಭಿಸಬೇಕೆಂದು ನಿಶ್ಚಯಿಸಿಕೊಂಡ. ಶಾಂತಿನಿಕೇತನದ 'ಉಗ್ರಾಣ'ದಿಂದ ಕಲಾವ್ಯಾಸಂಗಕ್ಕೆ ಬೇಕಾದ ಕಾಗದ, ಕುಂಚ, ಬಣ್ಣಗಳೂ ಸುಲಭ ಬೆಲೆಗೆ ದೊರೆತವು. ಸಂಜೆ ನೀಲರಂಜನ ಮತ್ತು ಅವನೀಶ ಬಾಬುವಿನೊಂದಿಗೆ ಶಾಂತಿನಿಕೇತನದ ಸ್ಥೂಲಪರಿಚಯಕ್ಕೆ ಹೊರಟ. ಕವಿ ರವೀಂದ್ರರ ಸುಂದರವಾದ ಗೃಹ—ದ್ವಿಜೇಂದ್ರನಾಥರ ಧ್ಯಾನಸ್ಥಳ—ಅಧ್ಯಾಪಕರ ಕುಠೀರ

ಗಳು—ಸ್ತ್ರೀಶಾಖಾ—ಬಾಲಶಿಕ್ಷಾ ವಿಭಾಗ—ಆಸ್ಪತ್ರೆ—ಅಂಚೆಯ ಕಛೇರಿ—ಪುಸ್ತಕಭಂಡಾರ ಮೊದಲಾದ ಎಲ್ಲ ಸ್ಥಳಗಳ ಪರಿಚಯವನ್ನು ಮಾಡಿಕೊಂಡ. ರಾತ್ರಿ ಎಲ್ಲರ ಭೋಜನ ತೀರಿದ ಮೇಲೆ ರಾಮಚಂದ್ರ, ಶ್ರೀಕಂಠಯ್ಯ ಮತ್ತು ಶರ್ಮರಿಗೆ ಹೃತ್ಪೂರ್ವಕ ವಂದನೆಗಳನ್ನರ್ಪಿಸಿ, ತನ್ನ ಗುರುದೇವನ ಉದಾತ್ತ ಹೃದಯದ ಪರಿಚಯ ಮಾಡಿಕೊಟ್ಟ. ಈ ಗೆಳೆಯರಿಗೆ ಕಾಗದ ಬರೆಯುತ್ತಿರುವಂತೆ ಮನಸ್ಸಿನಲ್ಲಿ ಮಿಂಚು ಸುಳಿದಂತಾಯಿತು. ಬೆಂಗಳೂರಿನ ಬಂಧುಗಳಿಗೂ ಬರೆಯಲೇ? ಎಂದುಕೊಂಡ. ನನ್ನ ವಿಚಾರ ಇಷ್ಟೊಂದು ಆಸಕ್ತಿ ತೆಗೆದುಕೊಂಡ ಅವರಿಗೆ ಬರೆಯದೇ ಇರುವುದು ನ್ಯಾಯವೇ? ಎಂದುತಾನು ಬರೆಯುತ್ತಿದ್ದ ಕಾಗದವನ್ನು ಒತ್ತಟ್ಟಿಗೆ ತಳ್ಳಿ ಬೆಂಗಳೂರಿಗೆ ಬರೆಯಲು ಮೊದಲುಮಾಡಿದ. ಮಾತುಗಳೇ ಹೊರಡವು—ಅಕ್ಷರಗಳೇ ಸುಳಿಯವು. 'ಛೆ? ಈಗ ಬರೆಯುವುದೆಂದರೇನು? ನಾಳೆ ನಾನು ಮುಖಕ್ಕೆ ಕಪ್ಪು ಬಳಿದುಕೊಂಡು ಊರಿಗೆ ಹಿಂದಿರುಗಿದರೆ ಅವರಿಗೆ ಮುಖ ಹೇಗೆ ತೋರಿಸಲಿ? ಕಾಗದ ಬರೆಯದೆ—ಮುಂದೆ ವಿಜಯಲಕ್ಷ್ಮಿ ಒಲಿದಾಗ—ಕಲಾದೇವಿಯ ಪೂರ್ಣಾನುಗ್ರಹ ದೊರೆತಾಗ—ಬರೆಯುವುದು' ಎಂದು ಸಮಾಧಾನ ತಂದುಕೊಂಡು ಶ್ರೀಕಂಠಯ್ಯನಿಗೆ ಬರೆದು ಮುಗಿಸಿದ.

ಎಳೆಯೌವನವನ್ನು ಸವಿಗನಸುಗಳು ಬಂದು ಮುತ್ತಿದವು. ನಂದಲಾಲರ ಒಂದು ನುಡಿ ಅವನ ಹೃದಯದ ಮೇಲೆ ಜಾಜ್ವಲ್ಯವಾಗಿ ಪ್ರಕಾಶಿಸಲಾರಂಭಿಸಿತು. 'ನೀನು ಹುಟ್ಟುಕಲಾವಿದ'—'ನೀನು ಹುಟ್ಟುಕಲಾವಿದ.'

## ೯

ಅವನೀಶನಿಗೆ ಮನಮೋಹಕವಾದ ಶಾರೀರವಿದ್ದಿತು. ಅವನ ಸಂಗೀತಾಭ್ಯಾಸ ಸುಮಾರು ೨॥ ವರ್ಷಗಳಿಂದ ಸಾಗಿತ್ತು. ಮೊದಲಿನಿಂದಲೂ ಉತ್ತಮ ಗಾಯಕರ ಬೈಠಕ್ಕುಗಳನ್ನು ಕೇಳಿ ಕೇಳಿ ಅವರ ಉತ್ತಮವಾದ ಸಂಗತಿಗಳನ್ನು ಹಾಡುವುದನ್ನು ಕಲಿತಿದ್ದ. ನಾಲ್ಕಾರು ಕಡೆ ಸುತ್ತಾಡಿ, ಹತ್ತಾರು ಜನದ ಪರಿಚಯವಿದ್ದುದರಿಂದ ಅವನ ಕಡೆಗೆ

ಮಾಣಿಯ ಮನಸ್ಸು ಕೊಂಚಕೊಂಚವಾಗಿ ಒಲಿಯುತ್ತ ಬಂತು. ಅವನೀಶ ಹಾಡುವುದರಲ್ಲಿ ಎಷ್ಟು ಕುಶಲನೋ ಹರಟೆಯಲ್ಲಿಯೂ ಅಷ್ಟೇ ಕುಶಲ. ಹರಟೆಯಲ್ಲಿ ಅವನು ತುಂಬುತ್ತಿದ್ದ ರಸವೈವಿಧ್ಯದಲ್ಲಿ ವಿಷಯಗಳ ಸತ್ಯಾಸತ್ಯತೆಯ ಕಡೆಗೆ ಮನಸ್ಸು ಯಾರಿಗೂ ಹರಿಯುತ್ತಿರಲಿಲ್ಲ. ಅವನ ಅನುಭವ, ಸಾಹಸ, ಪ್ರಣಯವೇದನೆಗಳನ್ನು ಕೇಳುವುದಕ್ಕೆ ಮಾಣಿಯ ದೇಹವೆಲ್ಲಾ ಕಿವಿ ಆಗಿ ಬಿಡುತ್ತಿದ್ದಿತು. ಅವನೀಶ ನೀಲರಂಜನರು ಬಹು ದಿವಸಗಳ ಗೆಳೆಯರಾಗಿದ್ದರೂ ಅನೇಕ ವಿಚಾರಗಳಲ್ಲಿ ಅವರವರು ಸೇರುತ್ತಿರಲಿಲ್ಲ. ಅವನೀಶನ ಪ್ರಣಯ ಕಥೆಗಳೆಂದರೆ ನೀಲರಂಜನನಿಗೆ ತುಂಬಾ ಅಸಹ್ಯ. ಮಾಣಿ ಬಂದ ಮೇಲಂತೂ ಅವನು ತನ್ನ ಹಳೆಯ ಗೆಳೆಯನನ್ನು ಮಾತನಾಡಿಸುವುದನ್ನೇ ಕಡಿಮೆ ಮಾಡಿಬಿಟ್ಟ. ಒಂದು ದಿವಸ ಅಭ್ಯಾಸ ಮುಗಿದ ಮೇಲೆ ಮೂರು ಜನರೂ ಏನುಮಾಡುವುದೆಂದು ಯೋಚಿಸುತ್ತ ಕುಳಿತರು. ಮಾಣಿ ತಾನು ಬೆಂಗಳೂರಿಗೆ ಹಿಂದಿರುಗಿ ಅಲ್ಲಿ 'ಕಲಾಶಾಲೆ' ಯನ್ನು ತೆರೆದು ಬಡ ವಿದ್ಯಾರ್ಥಿಗಳಿಗೆ ಶಿಕ್ಷಣಕೊಡಬೇಕೆಂದಿರುವ ತನ್ನ ಆಶೆಯನ್ನು ತಿಳಿಸಿದ. ನೀಲರಂಜನ ತಾನು ಯೂರೋಪಿನ ಯಾತ್ರೆ ಮಾಡಿ ಬಂದು ಅನಂತರ ಜೀವನಕ್ರಮವನ್ನು ನಿಶ್ಚಯಿಸುವುದಾಗಿ ಹೇಳಿದ. ಅವನೀಶ ಕಲಕತ್ತೆಗೆ ಹೋಗಿ ಅಲ್ಲಿಯೇ ನೆಲಸಿ ಪಾಠಗಳಿಂದಲೂ, ಜೈಠಕ್ಕುಗಳಿಂದಲೂ ಯಥೇಚ್ಛವಾಗಿ ಹಣವನ್ನು ಸಂಪಾದಿಸಬೇಕೆಂದಿರುವ ತನ್ನ ಆಶಯವನ್ನು ತಿಳಿಸಿದ. ಮಾಣಿಗಿದು ಬಹಳ ಕ್ಷುಲ್ಲಕವಾದ ಆದರ್ಶವೆನಿಸಿತು. ಆದರೆ ಪಾಠ ಹೇಳುವುದರ ಮೂಲಕ ನಿಜವಾಗಿ ಅವನೀಶ ಆಶಿಸುವಷ್ಟು ಹಣ ದೊರೆಯುವುದೇ ?

"ಹೇಳು ಅವನೀಶ್. ಆ ಹಣವನ್ನೇನು ಮಾಡುವೆ ?"

"ನನ್ನ ಸುಖಕ್ಕಾಗಿ ಚೆಲ್ಲುವೆ."

"ಹಣ ಸಂಪಾದಿಸುವುದೇ ನಿನ್ನ ಸುಖವಲ್ಲವೇ ?"

"ಹೌದು. ಸಂಪಾದಿಸಿ ಅದಕ್ಕೂ ಮೀರಿದ ಸುಖಪಡಬೇಕೆಂದಿದ್ದೇನೆ."

"ಎಷ್ಟು ಹಣವನ್ನು ಸಂಪಾದಿಸಬೇಕೆಂದಿರುವೆ ?"

"ಒಂದೆರಡು ಲಕ್ಷಗಳಾದರೂ......."

"ಹೊ! ಬಹಳ ದೊಡ್ಡ ಗಂಟೇ ಸರಿ!! ನಿನ್ನ ಪಾಠ ಪ್ರವಚನಗಳಲ್ಲಿ ಅಷ್ಟು ದುಡ್ಡು ಸಿಕ್ಕುವುದೇನು ?"

"ಎಲ್ಲಿರುವೆ ಮಾಣೀ. ಒಮ್ಮೆ ಟಾಕೀಸ್‌ಗೆ (Talkies) ಸೇರಿ ನಾಲ್ಕಾರು ಚಿತ್ರಗಳು ಮಾಡಿದರಾಯಿತು. ಅವನೀಶ ಚಕ್ರವರ್ತಿ ಯಾದ ಎಂದುಕೋ."

"ಆದರೆ ಅಷ್ಟು ಹಣವನ್ನೇನು ಮಾಡುವೆಯೋ ಅವನೀ ?"

"ಮನಸ್ಸು ಬಂದಂತೆ ಚೆಲ್ಲುವೆ. ಮೋಟಾರುಗಳನ್ನು ಕೊಳ್ಳುವೆ- ಕಣ್ಣಿಗೊಪ್ಪುವ ಬಟ್ಟೆಗಳನ್ನು ಹೊಲಿಸುವೆ - ಮನಸ್ಸು ಆಶಿಸುವ ಸುಂದರಿಯರನ್ನು ಕೂಡುವೆ - ಕುಡಿಯುವೆ - ಉಮರ 'ರುಬಾಯಿಯಾತ್' ನಲ್ಲಿ ಹೇಳಿರುವ ಪ್ರತಿಯೊಂದು ಅಂಶವನ್ನೂ ಅನುಭವಿಸುವೆ."

"ಶ್! ಮೂಢಾ!! ನೀನೊಂದು ಪಶು!!!" ಎಂದು ನೀಲರಂಜನ ಮೋರೆಯನ್ನತ್ತ ತಿರುಗಿಸಿ ಯಾವುದೋ ಪತ್ರಿಕೆಯನ್ನು ನೋಡುತ್ತಾ ಕುಳಿತ. ಮಾಣಿಗೆ ಈ ಆಶೆಯ ಪೂರ್ಣಾಕಾರ ಚಿತ್ತದ ಮೇಲೆ ಚಿತ್ರಿತವಾಗ ಲೊಲ್ಲದು. ಅವನ ಜೀವನ ಇದುವರೆಗೆ ಒಂದೇ ಒಂದು ಆಶೆ - ಆದರ ಸಾರ್ಥಕ್ಯದ ಕಡೆಗಿದ್ದು ಈಗ ಇದ್ದಕ್ಕಿದ್ದಂತೆ ಬೇರೊಂದು ಮಾರ್ಗವನ್ನವ ಲಂಬಿಸಬೇಕಾದರೆ ಯಾವ ಪರಿತಾಪಕ್ಕೀಡಾಗುವುದೋ ಅದನ್ನು ಅನುಭವಿಸ ಹತ್ತಿತು. ನೀಲರಂಜನನ ಸತ್ಯಾಗ್ರಹ ಅವನೀಶನಿಗಿನ್ನೂ ಹುರುಪು ಕೊಟ್ಟಂತಾಯಿತು.

"ಸಂಗೀತಗಾರನ ವೃತ್ತಿಯ ಮುಂದೆ ಬೇರೆ ವೃತ್ತಿಯೇ ಇಲ್ಲ. ಮಾನವ ಸುಖಪಡಬೇಕಾದರೆ ಸಂಗೀತಗಾರನಾಗಬೇಕು - ಇಲ್ಲ - ನಟನಾಗಬೇಕು. ಏಕೆನ್ನುವಿಯೋ - ಕಲಾದೇವಿ ಅನಪೇಕ್ಷಿತವಾಗಿಯೇ ಅವನ ಮಡಲಿಗೆ ಅನೇಕ ದೇವಿಯರನ್ನು ಹಾಕುತ್ತಾಳೆ. ಇನ್ನು ಅದಕ್ಕಿಂತ ಸುಖವೆಲ್ಲಿಂದ ಬಂತಯ್ಯಾ ?"

ಮಾಣಿಗೂ ಜಿಗುಪ್ಸೆಯಾಗಲಾರಂಭವಾಯಿತು. "ಕಲೆಯ ಹೆಸರಿನಲ್ಲಿ ಇಂತಹ ನೀಚವೃತ್ತಿಯೇ ?" ಎಂದು ವಿಷಾದಕ್ಕೀಡಾದ. ಆದರೆ ಹರಟೆಯ ಬಂಟ ಅವನೀಶನ ತಿರುಳಿಲ್ಲದ ಮಾತಿಗೆ ಏನು ಬೆಲೆ ಕೊಡುವುದು ಎಂದು ತಾತ್ಸಾರದಿಂದ ಅವನ ಮಾತುಗಳನ್ನತ್ತ ನೂಕಿಬಿಟ್ಟ. ತನ್ನ

'ಅನುಭವಾಮೃತ'ಕ್ಕೆ ಪ್ರೋತ್ಸಾಹವಿಲ್ಲದುದನ್ನು ಕಂಡು ಅವನೀಶ ಆಕಳಿಸುತ್ತಾ ತನ್ನ ಕೋಣೆಗೆ ನಡೆದ.

ಅವನೀಶ ಹೋದದ್ದನ್ನು ನೋಡಿ ನೀಲರಂಜನ ಮೆಲ್ಲನೆ

"ಏನು ಮಾಣಿ. ಕಳುಹಿಸಿಬಿಟ್ಟೆಯಲ್ಲಾ ಉಮರ್‌ಖಯ್ಯಂ ಸಾಹೇಬರನ್ನ."

"ನಾನು ಕಳುಹಿಸುವುದೇನು. ಬೇಜಾರಾಯಿತು. ಅವನೇ ಹೋದ."

"ಯಾಕೆ? ಅವನ ಅನುಭವಗಳನ್ನೆಲ್ಲಾ ಪೂರ್ತಿ ಕೇಳಲಿಲ್ಲವಲ್ಲಾ"

"ಒಂದೇ ದಿವಸವೇತಕ್ಕೆಂದು ಸುಮ್ಮನಾದೆ."

"ಸರಸ—ಮುಂದಕ್ಕೆ—ವಿರಸಕ್ಕಿಟ್ಟುಕೊಂಡೀತು, ಸ್ವಲ್ಪ ಜೋಕೆಯಾಗಿರು ಮಗೂ."

"ನೀನು ಹೇಳುವುದು ನನಗೆ ಅರ್ಥವಾಗಲಿಲ್ಲ ನೀಲಾ. ಏನು ನಾನು ಅವನೀಶನ ಕೂಡ ಮಾತನಾಡಬಾರದೆಂದೋ?"

"ಅಲ್ಲ. ಹೆಚ್ಚು ಬಳಕೆ ಬೆಳಸಬಾರದೆಂದು."

"ಹಾಗಾದರೆ ನೀನೇತಕ್ಕೆ ಬೆಳಸಿದೆ?"

"ನಾನು ಬೆಳಸಿಯೇ ಇಲ್ಲವಲ್ಲಾ. ಮೊದಲಿಂದಲೂ ಎಷ್ಟೋ ಅಷ್ಟರಲ್ಲಿಯೇ ಇದ್ದೇನೆ. ಮಾಣಿ, ನನ್ನ ಸಲಿಗೆ ಕ್ಷಮಿಸು. ನೀನು ಖಂಡಿತವಾಗಿ ಅವನೊಂದಿಗೆ ಹೆಚ್ಚು ವ್ಯವಹರಿಸಬೇಡ."

"ನಿನ್ನದು ತಪ್ಪು ತಿಳುವಳಿಕೆ ಮತ್ತು ಕೆಟ್ಟ ಈರ್ಷೆ. ನಿನ್ನೊಂದಿಗೆ ಗೆಳೆತನ ಬೆಳೆಸಿದವರು ಬೇರೆ ಯಾರೊಂದಿಗೂ ವ್ಯವಹರಿಸಕೂಡದೆಂಬ ದುಷ್ಟ ಆಸೆ."

"ಹಾಗಲ್ಲ ಮಾಣಿ. ನೀನು ತಪ್ಪು ಭಾವಿಸಿಕೊಂಡೆ. ಅವನೀಶ ನನ್ನು ನೀನು ಕಾಣೆ........"

"ಸಾಕು ಸಾಕು ನನ್ನ ವಿಚಾರ ನನ್ನದು; ನಿನ್ನ ವಿಚಾರ ನಿನ್ನದು. ನನಗೆ ಧರ್ಮಬೋಧೆ ಕೊಡಲು ನೀನು ಯಾರು?"

"ಕ್ಷಮಿಸು ಮಾಣಿ. ನನ್ನದು ತಪ್ಪಾಯಿತು" ಎಂದು ನೀಲರಂಜನ ಹೋಗಿ ಮಲಗಿದ. ಏರಿದ ಕೋಪದ ಕಾವು ಮಾಣಿಗೆ ಸ್ವಲ್ಪ ಹೊತ್ತು ಇಳಿಯಲೇ ಇಲ್ಲ. ತಾನೂ ಹೋಗಿ ಮಲಗಿದ. ಮನಸ್ಸು ವ್ಯಗ್ರವಾಗಿ

ನಿದ್ದೆ ಹತ್ತಲಿಲ್ಲ. ತಾನು ದುಡುಕಿ ನೀಲನನ್ನು ಕಠೋರವಾಗಿ ಆಡಿದುದು ತಪ್ಪೆಂದು ಭಾವಿಸಿಕೊಂಡು ಈಗಲೇ ಕ್ಷಮೆ ಬೇಡುವುದೊಳ್ಳೆಯದೆಂದು ಮೆಲ್ಲನೆ ಅವನ ಮುಸುಕು ಎಳೆದ. ತೊಯ್ದು ದಿಂಬಿನ ಮೇಲೆ ಸಪ್ಪೆ ಮುಖ ಹಾಕಿ ನಿದ್ರಿಸುತ್ತಿದ್ದ ಗೆಳೆಯನ ತಲೆಯನ್ನು ಸೇವರಿಸಿ ಭಾರವಾದ ಹೃದಯದಿಂದ ಬಂದು ಮಲಗಿದ.

ಮಾರನೆಯ ದಿನ ಊಟಕ್ಕೆ ಮುಂಚೆ ನೀಲರಂಜನನ ಸಂದರ್ಶನವೇ ಮಾಣಿಗೆ ದೊರೆಯಲಿಲ್ಲ. ತಾನು ಏಳುವ ಮುನ್ನವೇ ಎದ್ದು ನೀಲ ಹೊರಟು ಹೋಗಿದ್ದ. ಅನಂತರ ಶಾಲೆ. ಅಲ್ಲಿ ಅಕ್ಕಪಕ್ಕದಲ್ಲಿಯೇ ಕುಳಿತಿದ್ದರೂ ಮಾತನಾಡಿಸಲವಕಾಶವಿಲ್ಲ. ಹೀಗಾಗಿ ಶಾಲೆ ಮುಗಿಯುವುದನ್ನೇ ಮಾಣಿ ಕಾದಿದ್ದ. ಭೋಜನಶಾಲೆಗಂತೂ ಇಬ್ಬರೂ ಒಟ್ಟಿಗೆ ಹೋಗ ಬೇಕೆಂದು ಮೊದಲೇ ನಿಶ್ಚಯಿಸಿಕೊಂಡಿದ್ದರು. ಒಬ್ಬರನ್ನು ಬಿಟ್ಟೊಬ್ಬರು ಊಟಮಾಡಿ ಬರುವಂತೆಯೇ ಇಲ್ಲ. ದಾರಿಯಲ್ಲಿ ನೀಲರಂಜನನೇ ಮಾತು ತೆಗೆದು

"ನಿನ್ನೆ ನಾನು ಆಡಿದ ಮಾತು ಕ್ಷಮಿಸು ಮಾಣಿ. ಅವನೀಶನ ಮೇಲೆ ಖಂಡಿತವಾಗಿಯೂ ನನಗೆ ಈರ್ಷೆಯಿಲ್ಲ. ನನ್ನ ತಪ್ಪಿಗೆ ಅವನ ಕ್ಷಮೆಯನ್ನು ಬೇಡಲು ಸಿದ್ಧನಿದ್ದೇನೆ" ಎಂದು ಕಳಕಳಿಯಿಂದ ನುಡಿದ. ಮಾಣಿ ಗಂಟಲು ಬಿಗಿದು ಬಂದಿತು. ನಿರುತ್ತರನಾಗಿ ಅವನನ್ನಪ್ಪಿ 'ಗೊಳೋ' ಎಂದು ಅತ್ತುಬಿಟ್ಟ. ಮಧ್ಯೆಮಧ್ಯೆ

"ನೀನೇ ಹೀಗೆಂದ ಮೇಲೆ ಮುಂದೆ ನನಗೆ ಯಾರು ನೀಲಾ?" ಎಂದ. ಗೆಳೆಯರಿಬ್ಬರೂ ಒಂದಾದರು. ಕಂಬನಿಯ ಕಲೆಗಳನ್ನು ನಿವಾರಿಸಿಕೊಂಡು ಸಂತೋಷದಿಂದ ಊಟಮಾಡಿ ಬಂದರು.

ರಾತ್ರಿ ತನ್ನ ಮನಸ್ಸಿನಲ್ಲಾದ ಮಹಾಯುದ್ಧವನ್ನು ಮಾಣಿ ವರ್ಣಿಸುತ್ತಾ ತನ್ನ ಮೂವರು ಬಂಧುಗಳನ್ನು ನೆನೆದು ದೀರ್ಘವಾಗಿ ನಿಟ್ಟುಸಿರು ಬಿಟ್ಟ. "ಅವರ ಸ್ಥಾನದಲ್ಲಿ ನೀನು ಇರುವೆ ನೀಲಾ. ನನ್ನ ತಪ್ಪುಗಳನ್ನು ಕ್ಷಮಿಸು. ನೀನು ಎಷ್ಟಾದರೂ ದೊಡ್ಡವನು. ಎಲ್ಲಾ ವಿಚಾರದಲ್ಲಿಯೂ ದೊಡ್ಡವನು."

"ಇದೆಂತಹ ಮಾತು ಮಾಣಿ. ಗೆಳೆತನದಲ್ಲಿ ದೊಡ್ಡದು ಚಿಕ್ಕದು

ಎಲ್ಲಿಂದ ಬಂತು? ಆ ಸಹೃದಯತೆ ಇಲ್ಲದಿದ್ದರೆ ನೀನು ಕರ್ನಾಟಕದಿಂದ ಇಲ್ಲಿಯವರೆಗೆ ಏತಕ್ಕೆ ಬರುತ್ತಿದ್ದೆ."

"ನಿಜ ನಿಜ. ನೀನು ಎತ್ತರವಾದ ಹಂತದ ಮೇಲೆ ನಿಂತು ನಮ್ಮಂತಹ ಕುಂಟರನ್ನು ಅಲ್ಲಿಗೆ ಕರೆಯುತ್ತಿರುವೆ.... ಇನ್ನೊಂದು ಮಾತು. ನಿನ್ನನ್ನು ಕೇಳಿ ಮುಂದಿನ ಯೋಚನೆ ಮಾಡಬೇಕೆಂದಿದ್ದೇನೆ. ಕೇಳಲೇ?"

"ಕೇಳಲೇ ಏನು ಬಂತು, ಅವಶ್ಯಕವಾಗಿ ಕೇಳು,"

"ದಿನವೂ ಸಂಜೆ ಮಾಡಲು ಕೆಲಸವಿಲ್ಲ, ನಾನು 'ಸಂಗೀತ'ವನ್ನು ಏತಕ್ಕೆ ಕಲಿಯಬಾರದು. ರವೀಂದ್ರರ ಕೆಲವು ಗೀತೆಗಳನ್ನು ಕಲಿಯಬೇಕೆಂದು ಮನಸ್ಸು ಬಹಳ ಹಾತೊರೆಯುತ್ತಿದೆ. ಮೊನ್ನೆ ಅವನೀಶನ ಬಾಯಲ್ಲಿ 'ದೇವಿ ಭುವನಮನಮೋಹಿನಿ' ಕೇಳಿದ ಮೇಲಂತೂ ಹಂಬಲ ಮೇರೆ ಮೀರಿದೆ."

"ಕಲಿ. ಅದಕ್ಕೇಕೆ ಇಷ್ಟು ಪೀಠಿಕೆ. ಆದರೆ ಚಿತ್ರಕಲಾಭ್ಯಾಸವನ್ನು ಮಾತ್ರ ಉಪೇಕ್ಷೆಮಾಡಬೇಡ. ಎರಡನ್ನೂ ಒಮ್ಮೆಲೇ ಕಲಿಯಲು ಸಾಧ್ಯವಿಲ್ಲ. ಯೋಚಿಸು, ಯೋಚಿಸು. ನಿನಗೆ ಹೇಗೆ ಸೂಕ್ತವೋ ಹಾಗೆ ಮಾಡು."

ನೀಲರಂಜನನ ಮಾರ್ಮಿಕ ನುಡಿ ಮಾಣಿಯ ವಿಚಾರಶಕ್ತಿಯನ್ನು ಕೆದಕಿತು. ವೆಂಕಟಪ್ಪನವರ 'ವೀಣೆಯ ಹುಚ್ಚು' ಚಿತ್ರದ ನೆನಪಾಯಿತು. ಅಂತಹ ಕಲಾವಿಭೂತಿಯೇ ಸಂದೇಹಗ್ರಸ್ತನಾಗಿ ತೊಳಲಿ ಬಳಲಿದಾಗ ಇನ್ನು ತನ್ನ ಪಾಡೇನು ಎಂದು ನೆನೆದ. ಒಂದು ಜೀವಮಾನದಲ್ಲಿ ಒಂದು ಕಲೆಯನ್ನೇ ಸಾಧಿಸಲಾಗದೆ ಇರುವಾಗ ಎರಡು ಮೂರಕ್ಕೆ ಕೈ ಹಾಕುವುದು ನ್ಯಾಯವೇ? ಅದೂ ಇಲ್ಲದೆ ಇದೂ ಇಲ್ಲದೆ 'ತ್ರಿಶಂಕು ಸ್ವರ್ಗ'ವನ್ನು ಸೇರಬೇಕಾದೀತೇನೋ? ಎಂದು ಯೋಚಿಸಿದ. ದೂರದತ್ತಣಿಂದ ಸಂತಾಲೀ ಗೋವಳನ ಬಿದುರು ಕೊಳವೆಯ ಗಾನ ಕೇಳಲಾರಂಭವಾಯಿತು — ಚಿತ್ತಕೊಟ್ಟಾಲಾಲಿಸಿದ — ಮಧುರ ಮ ಧ್ಯ ಮಾ ವ ತಿ— ಹೊತ್ತಿಗೆ ಹೊಂದಿದ ರಾಗ—ಗೋವಳನ ಗಾನದಲ್ಲಿ ಚಮತ್ಕಾರವಿರದಿದ್ದರೂ ಅಂತಃಕರಣ ಮೂಡಿತ್ತು. ಅದನ್ನು ಕೇಳುತ್ತ ಕೇಳುತ್ತ

"ಇಂದೇ ಅಭ್ಯಾಸವನ್ನಾರಂಭಿಸುವೆ ನೀಲಾ, ಸಂಗೀತ ಕಲಿಯದೇ ಉಂಟೇ?" ಎಂದು ನುಡಿದ.

೧೦

ದುರ್ಗಾಪೂಜೆಯೆಂದರೆ ಬಂಗಾಳ ಬಂಗಾಳಕ್ಕೇ ದೊಡ್ಡ ಹಬ್ಬ. ಕಲ್ಕತ್ತಾ ಮಹಾನಗರವಂತೂ ಆಗ ಜನಸಂದಣಿಯಿಂದ ತುಂಬಿ ತುಳುಕಲಾರಂಭಿಸುತ್ತದೆ. ಅಕ್ಕಪಕ್ಕದ ಪ್ರಾಂತ್ಯಗಳಿಂದ ಆ ಹಬ್ಬ ನೋಡಲು ಜನ ಬರುವುದೂ ಉಂಟು. ಕಾಳಿಕಾದೇವಿಯ ದೇವಾಲಯದ ಮುಂದಂತೂ ರಕ್ತದ ಕೋಡಿ ಹರಿದು ಹೆಪ್ಪುಗಟ್ಟಿ ಕೃಷ್ಣವರ್ಣ ತಾಳಿ ನಿಂತಿರುತ್ತದೆ. ಜನತೆಯ ಮೌಢ್ಯವನ್ನು ಕಂಡು ತಾಯಿ ರೋಷಗೊಂಡಿರುವಳೋ ಎಂಬಂತೆ ನೆತ್ತರಿನ ನಾಲಿಗೆ ಚಾಚಿ, ರುಂಡ ಮಾಲೆ ಧರಿಸಿ, ಕಂಗಳಲ್ಲಿ ಕೆಂಡ ಕಾರುತ್ತಾ ನಿಂತಿರುತ್ತಾಳೆ. ಸಂತ, ಸಾಧು, ಬೈರಾಗಿ, ಭಿಕ್ಷುಕಿಯರ ಗುಂಪು ಲೆಕ್ಕವಿಲ್ಲದಂತೆ ನೆರೆದು ಬಗೆಬಗೆಯಾಗಿ ಜನತೆಯನ್ನು ರಮಿಸಿ ಸುಲಿಯುತ್ತದೆ. ಎಲ್ಲ ಬಗೆಯ ಅನೀತಿ ವ್ಯಾಪಾರಕ್ಕೂ ಅದೇ ಮಾತೃಸ್ಥಳವಾಗುತ್ತದೆ; ಎಲ್ಲ ತೆರದ ತಿರಸ್ಕೃತ ಪದಾರ್ಥಗಳನ್ನು ವಿಕ್ರಯಿಸುವುದಕ್ಕೂ ಅದೇ ತಕ್ಕ ಸ್ಥಾನವಾಗುತ್ತದೆ. ಒಟ್ಟಿನಲ್ಲಿ ಧರ್ಮದ ಹೆಸರನ್ನು—ದೇವರ ಹೆಸರನ್ನು ಮನುಷ್ಯ ಯಾವ ಅಪಗತಿಗೆ ಎಳೆಯಬಹುದೆಂಬುದರ ದೃಷ್ಟಾಂತ ನೋಡಬೇಕಾದರೆ ದುರ್ಗಾಪೂಜೆಯ ಕಾಲದ ಕಾಳೀಘಟ್ಟಕ್ಕೆ ಹೋಗಬೇಕೆಂದರೆ ತಪ್ಪಾಗಲಾರದು.

ಕೆಟ್ಟದಿದ್ದೆಡೆಯಲ್ಲಿ ಒಳ್ಳೆಯದೂ ಇದ್ದೇ ಇರುವಂತೆ ಉತ್ತಮ ಕಲಾ—ಕೂಟಗಳನ್ನು ಕೂಡಿಸಲು ಸುಸಂಸ್ಕೃತ ಸಮಾಜಗಳೂ ಆಗಲೇ ಹವಣಿಸುತ್ತವೆ. ವರ್ಷಂಪ್ರತಿ ಆ ಕಾಲದಲ್ಲಿಯೇ ಸಂಗೀತ ಸಮ್ಮೇಳನಗಳೂ, ಕಲಾ ಪ್ರದರ್ಶನಗಳೂ, ಸಾಹಿತ್ಯ ಮಹೋತ್ಸವಗಳೂ ಜರುಗುವುದುಂಟು.

ಶಾಂತಿನಿಕೇತನದಲ್ಲಿ ತಾನಿದ್ದ ನಾಲ್ಕೈದು ತಿಂಗಳಲ್ಲಿ ಮಾಣಿ ಬಂಗಾಳದ ವಿಚಾರ ಅನೇಕ ಸುದ್ದಿ ಸಮಾಚಾರಗಳನ್ನು ಕೇಳಿದ್ದ—ಕಾಳೀಘಟ್ಟದಲ್ಲಿ ನಡೆಯುವ ಲೀಲೆಗಳನ್ನು ಅವನೀಶನ ಅಮೃತವಾಣಿಯಿಂದಲೇ ಕೇಳಿದ್ದ; ಸಾಹಿತ್ಯ, ಸಂಗೀತ, ಚಿತ್ರಕಲಾ ಉತ್ಸವಗಳ ವಿಜೃಂಭಣೆ

ಯನ್ನು ನೀಲರಂಜನನ ಬಾಯಿಂದ ಕೇಳಿದ್ದ. ಇನ್ನೂ ಅನೇಕ ವಿಷಯಗಳು ಅವನಿಗಾಗಲೇ ಗೊತ್ತಾಗಿದ್ದವು. ಅವುಗಳೆಲ್ಲದರ ಯಥಾರ್ಥತೆಯನ್ನು ಒಮ್ಮೆ ತಾನೇ ಪರೀಕ್ಷಿಸಿ ಬಿಡಬೇಕೆಂದುಕೊಂಡ. ಅನುಕೂಲಕ್ಕೆ ತಕ್ಕಂತೆ ಶಾಲೆಗೆ ದುರ್ಗಾಪೂಜೆಯ ಹತ್ತು ದಿವಸಗಳ ರಜೆ (ಸೂಟೆ)ಯೂ ದೊರಕಿತು. ಕಲ್ಕತ್ತೆಗೆ ಬಾ-ಬಾರೆಂದು ರಾಮಚಂದ್ರ, ಶ್ರೀಕಂಠರ ಬಲವಂತವೂ ಹೆಚ್ಚಾಗಿತ್ತು. ಎಲ್ಲಕ್ಕೂ ಹಿರಿದಾಗಿ ಅವನೀಶ ಹೊರಟು ನಿಂತಿದ್ದ. ಅವನ ಜತೆ ಸಿಕ್ಕುವುದಲ್ಲಾ ಎಂಬ ಆಶೆ. ಕೆಲವು ಚಿತ್ರಗಳನ್ನು ತಾನು ಮಾರಿಸಿ ಕೊಡುವುದಾಗಿ ಬೇರೆ ಅವನೀಶನ ಆಶ್ವಾಸನ. ಇದೂ ಸೇರಿ ಕಲ್ಕತ್ತೆಗೆ ದುರ್ಗಾಪೂಜೆಗೆ ಹೋಗಿಯೇ ಬಿಡಬೇಕೆಂದು ಮಾಣಿ ನಿಶ್ಚಯಿಸಿಬಿಟ್ಟ.

ಇವುಗಳ ಜೊತೆಗೆ ಇನ್ನೊಂದು ಕಾರಣ ಮಾಣಿಯನ್ನು ಕಲ್ಕತ್ತೆಗೆ ಹೋಗೆಂದು ವಿಶೇಷ ಪ್ರೇರೇಪಿಸುತ್ತಿತ್ತು. ತಾನು ಬಂಗಾಳಕ್ಕೆ ಬಂದು ಇಷ್ಟು ದಿವಸಗಳಾದರೂ ತನ್ನ ಅಭ್ಯುದಯಕ್ಕೆ ಕಾರಣಕರ್ತರಾದ ಒಲೀಂದ್ರಕುಮಾರ ಗಂಗೂಲಿಯವರ ಸಂದರ್ಶನವನ್ನು ಮಾಡಿಲ್ಲವಲ್ಲಾ ಎಂದು ಪರಿತಪಿಸುತ್ತಿದ್ದ ಮನಸ್ಸಿಗೆ ಈಗ ಸಮಾಧಾನವನ್ನುಂಟುಮಾಡಬಹುದಲ್ಲಾ ಎಂಬ ಆಶೆ.

ಅವನೀಶನ ಜತೆ ಕಲ್ಕತ್ತೆಗೆ ಬಂದದ್ದೂ ಆಯಿತು. ತನ್ನ ವಿಳಾಸವನ್ನಿತ್ತು ಅವನೀಶ ಬಂಧುಗಳ ಜತೆ ತೆರಳಿದ. ಮಾಣಿ ಶ್ರೀಕಂಠ, ರಾಮಚಂದ್ರರೊಡನೆ ಭವಾನಿಪುರಕ್ಕೆ ಹೊರಟ. ಗೆಳೆಯರನ್ನು ಕಂಡ ಸಂತೋಷ ಮಾಣಿಯ ಹೃದಯವನ್ನು ಉಲ್ಲಾಸದ ಕಡಲಿನಲ್ಲಿ ಮಿಾಯಿಸಿ ಬಿಟ್ಟಿದ್ದಿತು. ಅವರಿಗೆ ತನ್ನ ಚಿತ್ರಕೃತಿಗಳನ್ನು ತೋರುತ್ತ ತೋರುತ್ತ ದೈನ್ಯದಿಂದ

"ಏನನ್ನುವಿರಿ ?" ಎಂದು ಕೇಳಿದ.

ಶ್ರೀಕಂಠ, ರಾಮಚಂದ್ರರಿಬ್ಬರೂ ಮಾಣಿಯ ಮೊದಲಿನ ಕೃತಿಗಳನ್ನು ಕಂಡಿದ್ದರು. ಅವನೆದುರಿಗೆ ಹೇಳದಿದ್ದರೂ ತಮ್ಮ ತಮ್ಮಲ್ಲಿಯೇ ಅವುಗಳ ನೀರಸತೆ, ಅಸಹಜತೆಗಳನ್ನು ಕುರಿತು ಮಾತನಾಡಿಕೊಂಡಿದ್ದರು. ಈಗ ಅದೇ ಶಿಲ್ಪಿಯ ಬೇರೆ ಕೃತಿಗಳು; ಕೆಲವು ಸಂತಾಲ ಜನಜೀವನದ

ಚಿತ್ರಗಳು; ಶಾಂತಿನಿಕೇತನದ ಕೆಲವು ನೋಟಗಳು; ಒಂದೆರಡು ಬುದ್ಧ ಭಗವಾನನ ಪರಿಶುದ್ಧ ಜೀವನದ ಚಿತ್ರಗಳು; ಚಿತ್ರಗಳನ್ನು ನೋಡುತ್ತಾ ಗೆಳೆಯರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಶ್ರೀಕಂಠ ಬುದ್ಧದೇವನ ಶಿರವನ್ನು ಮಾತ್ರ ಚಿತ್ರಿಸಿದ್ದ ಪಠವನ್ನು ಮತ್ತೆ ಮತ್ತೆ ನೋಡುತ್ತಾ ಆಶ್ಚರ್ಯಚಕಿತನಾದ. ಒಮ್ಮೆ ಹಾಗೆಯೇ ಅನಪೇಕ್ಷಿತ ವಾಗಿ ಅವನ ಕಣ್ಣುಗಳು ಮಾಣಿಯ ಎಡೆಗೆ ಜಾರಿದವು. ಗೆಳೆಯರಿಬ್ಬರೂ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಗೊಳಿಸದಿರಲು ಮಾಣಿ ವ್ಯಗ್ರಚಿತ್ತ ನಾದ. 'ಇವರಿಗೆ ಚಿತ್ರಗಳು ಹಿಡಿದಿಲ್ಲವೇನೋ?' ಎಂದು ಸಂಶಯ ಪಟ್ಟುಕೊಂಡೇ

"ಚಿತ್ರಗಳು ಹೇಗಿವೆ?" ಎಂದ.

"ಉಪಮಾತೀತವಾಗಿವೆ" ಎಂದು ಶ್ರೀಕಂಠಯ್ಯ ಮರುನುಡಿದ.

"ಇವುಗಳಲ್ಲಿ ದೈವಿಕಹಸ್ತವೊಂದರ ಅಮಾನುಷ ವಿಲಾಸವಿದೆ. ಬಂಗಾಳಕ್ಕೆ ಬಂದ ಇಷ್ಟು ಅಲ್ಪಕಾಲದಲ್ಲಿ ಈ ಕಲಾಪ್ರತಿಭೆಯೆಂದರೆ ನನಗೆ ಬಹಳ ಆಶ್ಚರ್ಯವಾಗುತ್ತದೆ" ಎಂದು ರಾಮಚಂದ್ರ ಜೋಡಿಸಿದ. ಮಾಣಿ ಎದ್ದು ತನ್ನ ಪೆಟ್ಟಿಗೆಯಲ್ಲಿ ಬಚ್ಚಿಟ್ಟಿದ್ದ ಒಂದು ಚಿತ್ರವನ್ನು ತೆಗೆದು ರಾಮಚಂದ್ರನ ಕೈಗಿತ್ತ. ಅದನ್ನು ದಿಟ್ಟಿಸಿ ನೋಡುತ್ತಾ ರಾಮ ಚಂದ್ರ ಅವಾಕ್ಕಾದ. 'ನಂದಾಲಾಲರ ಭಾವಚಿತ್ರ' ವ್ಯಕ್ತಿಗಳ ಅಂತರಂಗವನ್ನು ಒಳಹೊಕ್ಕು ಅದರ ಪ್ರಭೆಯನ್ನು ಹೊರಗೆ ಬೆಳಗಿಸು ವಂತಹ ಕಲೆಯನ್ನು ಸ್ವಾಧೀನಪಡಿಸಿಕೊಂಡಿರುವ ಕಲಾವಿದ ತನ್ನವ ನೆಂಬ ಹೆಮ್ಮೆಯಂತೂ ರಾಮಚಂದ್ರನನ್ನು ಮಾತಿಲ್ಲದಂತೆ ಮಾಡಿತು. ಶ್ರಿಕಂಠ ಅದನ್ನು ಮೆಲ್ಲನೆ ರಾಮಚಂದ್ರನಿಂದ ಬಿಡಿಸಿಕೊಂಡು ನೋಡಿ ತುಂಬಿದ ಪ್ರೇಮದಿಂದ ಮಾಣಿಯನ್ನು ನೋಡಿ ಅವನ ತಲೆ ನೇವರಿ ಸಿದ. ಈ ಸರಳ ಸ್ನೇಹವನ್ನು ನೋಡಿ ಮಾಣಿಯ ಜೀವನ ತುಂಬಿ ಹೋಯಿತು. ಜಗತ್ತಿನ ಯಾವ ಬಗೆಯ ಆಶಾಶೃಂಖಲೆಗೂ ಬದ್ಧವಾಗದೆ ಕಲಾಕಾಶದಲ್ಲಿ ನಿರ್ಲಿಪ್ತರಾಗಿ ಹಾರಾಡುತ್ತಿದ್ಧ ಆ ಎರಡು ಹಕ್ಕಿಗಳನ್ನು ಕಂಡ ತಾನು ಧನ್ಯನೆಂದು ಭಾವಿಸಿಕೊಂಡ. ತನ್ನ ಜೀವನ ಅಲ್ಪ ಆಶೆ—ಅಲ್ಪ ಸಂತೃಪ್ತಿ—ಅಲ್ಪ ಭಾವನೆಗಳಿಂದ ಮೇಲಕ್ಕೆ ಏಳಬೇಕಾದರೆ

ಇಂತಹ ಗೆಳೆಯರ ನಿರ್ವ್ಯಾಜ ವಿಶ್ವಾಸ ಆವಶ್ಯಕವೆಂದು ಗ್ರಹಿಸಿದ. ಭಾವನೆಯ ಹಕ್ಕಿ ಸಾವಿರಾರು ಮೈಲಿಗಳ ಅಂತರವನ್ನು ಲಕ್ಷಿಸದೆ ಒಮ್ಮೆಲೇ ಬೆಂಗಳೂರಿಗೆ ಹಾರಿತು. ಅಲ್ಲಿನ ಗೆಳೆಯರನ್ನು ಹತ್ತಿರ ತಂದಿತು; ಅವರ ಮಾತುಕತೆ – ಮೃದುನುಡಿ – ನಯವಾದ ಟೀಕೆಗಳನ್ನು ಜ್ಞಾಪಿಸಿ ಕೊಟ್ಟಿತು, ಅಲ್ಲಿಂದ ತಕ್ಷಣವೇ ಶಾಂತಿನಿಕೇತನಕ್ಕೆ ಹಾರಿತು. ನೀಲರಂಜನ ನನ್ನು ಹೃದಯಮಂದಿರಕ್ಕೆ ಎಳತಂದಿತು. ಎಲ್ಲವನ್ನೂ ಚಿಂತಿಸುತ್ತಾ, ಈ ಅಗಾಧ ಪ್ರೇಮದ ಮುಂದೆ ತಾನು ಎಷ್ಟು ಸಣ್ಣವನೆಂದು ಮಾಣಿ ಚಿಂತಿಸಿದ. ಕಣ್ಣುಗಳು ನೀರು ತುಂಬಿತು. ಗೆಳೆಯರಿಗೆ ಆವೇಶವನ್ನು ತೋರಗೊಡದೆ

"ನಾನಿನ್ನು ಹೊರಡಬೇಕು. ಚೌರಂಘಿಚೌಕದಲ್ಲಿ ಅವನೀಶ ಕಾಯುತ್ತಿರುತ್ತಾನೆ" ಎಂದು ಹೇಳಿ ಚೌರಂಘಿಚೌಕಕ್ಕೆ ದಾರಿಯನ್ನು ತಿಳಿದುಕೊಂಡು ಹೊರಟ. ಗೆಳೆಯರಿಬ್ಬರೂ ತಮ್ಮ ತಮ್ಮ ಪ್ರೀತಿಯ ಚಿತ್ರಗಳನ್ನು ನೋಡುತ್ತಾ ಅಲ್ಲೇ ಕುಳಿತರು.

## ೧೧

ತನಗಾಗಿ ಎಲ್ಲಿ ಕಾದಿರುವನೋ ಎಂಬ ಭಯದಿಂದಲೇ ಅವನೀಶ ಚೌರಂಘಿಚೌಕವನ್ನು ತಲುಪಿದ. ಮಾಣಿಯ ಸುಳಿವು ಎಲ್ಲಿಯೂ ಕಾಣಲಿಲ್ಲ. ಚೌಕವನ್ನೆಲ್ಲಾ ಒಮ್ಮೆ ಹುಡುಕುತ್ತಾ ಸುತ್ತಿ ಬಂದ. ಆದರೂ ಸುಳಿವು ಕಂಡು ಬರಲಿಲ್ಲ. "ಅವನು ಇಲ್ಲಿಗೆ ಬಂದು ನಾನಿಲ್ಲದಿರಲು ಎಲ್ಲಿಗಾದರೂ ಹೊರಟು ಹೋಗಿರಬಹುದೇ?" ಎಂದು ಆಲೋಚಿಸುತ್ತಾ "ಹೇಗಾದರೂ ಆಗಲಿ. ಇನ್ನೂ ಸ್ವಲ್ಪ ಹೊತ್ತು ಕಾಯುವುದು. ಅವನು ಬರದಿದ್ದರೆ ಹಿಂದಿರುಗುವುದು" ಎಂದು ನಿರ್ಧರಿಸಿ ಕುಳಿತುಕೊಂಡ.

ಕಲ್ಕತ್ತಾ ನಗರಕ್ಕೆ 'ಅತ್ಯಂತ ಸುಂದರ ನಗರ'ವೆಂಬ ಹೆಸರು ಬರಲು ಚೌರಂಘಿಚೌಕ ಅಷ್ಟಿಷ್ಟು ಸಹಾಯ ಮಾಡಿತೆಂದು ಹೇಳಲಾಗು ವುದಿಲ್ಲ: ಗಗನದೊಂದಿಗೆ ಸ್ಪರ್ಧಿಸಲು ಹೊರಟಿದ್ದ ಉನ್ನತ ಸೌಧಗಳು; ಅಂದವಾಗಿ ಅಲಂಕೃತವಾಗಿ ಕಣ್ – ಮನಗಳನ್ನು ಎಳೆಯುವಂತೆ ರಂಜಿಸು ತ್ತಿದ್ದ ಮಳಿಗೆಗಳ ಮುಂಭಾಗಗಳು; ಅವುಗಳ ಮುಂದೆ ಬಗೆಬಗೆಯ ರೂಪ

ತಾಳಿ ನಿಂತಿದ್ದ ಪುಟ್ಟದಾದ ಸುಂದರ ಉಪವನ– ಇವುಗಳ ಪ್ರಯೋಜನ ಉಪಯೋಗಿಸಿಕೊಳ್ಳುವವರ ಯೋಗ್ಯತೆಯನ್ನು ಅನುಸರಿಸಿದ್ದಿತು. ಅವ ನೀಶ ಉಪವನದ ಒಂದು ಪೀಠದ ಮೇಲೆ ಕುಳಿತು ಎದುರಿಗೆ ಸುಳಿದಾಡು ತ್ತಿದ್ದ ಸುಂದರಿಯರ ರೂಪಸುಧೆಯನ್ನು ಸವಿಯುತ್ತಾ ಹಗಲುಗನಸುಗಳನ್ನು ಕಾಣುತ್ತಿದ್ದ. ಮಾಣಿ ತೋರುತ್ತಿದ್ದ ಉಪೇಕ್ಷೆಗೆ ಅವನೀಶನ ರಕ್ತ ಕುದಿಯತೊಡಗಿತ್ತು. 'ತನ್ನನ್ನು ಇಂತು ಕಾಯಿಸುತ್ತಿದ್ದಾನಲ್ಲಾ' ಎಂದು ಮಹದಾಗ್ರಹಗೊಂಡು, ಅದರ ಚಾವಟಿ ಪೆಟ್ಟನ್ನು ಸ್ವೀಕ ರಿಸುವವರು ಯಾರೂ ಇಲ್ಲದಿರಲು ತನ್ನಲ್ಲಿಯೇ ಅಡಗಿಸಿಕೊಂಡು ಕುಳಿತ. ಸ್ವಲ್ಪಹೊತ್ತು ಕಳೆಯಲು ದೂರದಲ್ಲಿ ಮಾಣಿ ಬರುತ್ತಿರುವುದನ್ನು ಕಂಡು, ತಾನೇ ಅರ್ಧದಾರಿ ನಡೆದು ಅವನೊಂದಿಗೆ ಮುಂದಕ್ಕೆ ಹೊರಟ. ಕೋಪದಾವೇಗದಲ್ಲಿ ಅವನೀಶನ ಮಾತು ನಿಂತು ಹೋಗಿತ್ತು. ಮಾಣಿಯೇ ಉಪಕ್ರಮಿಸಿದ—

"ಕ್ಷಮಿಸು ಅವನೀ ತಪ್ಪು ನನ್ನದಲ್ಲ. ನನ್ನ ಮೈಸೂರು ಗೆಳೆಯರು ಚಿತ್ರಗಳನ್ನು ನೋಡುತ್ತಾ ಕುಳಿತರು...."

"ಸರಿ. ಒಳ್ಳೆಯ ಹೊತ್ತು. ನಾನಿಲ್ಲಿ ಕಾಯುತ್ತಾ ಸಾಯುತ್ತಿದ್ದರೆ ಅಲ್ಲಿ ನಿನ್ನ ಚಿತ್ರಪ್ರದರ್ಶನ ಆಗಲಿ. ಇನ್ನು ಮೇಲೆ ಹೀಗೆ ಮಾಡಬೇಡ" ಎಂದು ಔದಾರ್ಯದಿಂದ ಬೆನ್ನು ಚಪ್ಪರಿಸಿದ. ಮಾಣಿ ನಗುತ್ತಾ ಗೆಳೆಯನ ಕ್ಷಮೆ ದೊರೆತುದಕ್ಕೆ ಸಂತೋಷಿಸುತ್ತಾ

"ಎಲ್ಲಿಗೆ ಹೋಗೋಣ ಅವನೀ."

"ನಿನ್ನ ಇಚ್ಛೆ ಬಂದಲ್ಲಿಗೆ........ಎಂಟು ಘಂಟೆಯತನಕ ನೀನು ನಾಯಕ ನಾನು ಸೇವಕ; ಅನಂತರ ನಾನು ನಾಯಕ ನೀನು ಸೇವಕ."

"ಹಾಗೆಂದರೆ....".

"ಮುಂದೆ ನಿನಗೇ ತಿಳಿಯುವುದು. ಈಗ 'ಮಲ್ಲಿಕ್ ಅರಮನೆ'ಯ ಚಿತ್ರಕಲಾ ಸಂಗ್ರಹವನ್ನು ನೋಡುವುದಕ್ಕೆ ಹೋಗೋಣವೇ ?"

"ಅಲ್ಲಿಗೆ ಇಂದು ಬೇಡ. ನಾಳೆಹೋಗೋಣ. ಮೊದಲು ಗಂಗೂಲಿ ಯವರ ದರ್ಶನ ತೆಗೆದುಕೊಂಡು ಅನಂತರ ಮಿಕ್ಕ ಮಾತು."

ಇಬ್ಬರೂ ಗಂಗೂಲಿಯವರ ಮನೆಯ ಕಡೆ ನಡೆದರು. ಅಲ್ಲಿ ಒಬ್ಬ

ಆಳು 'ಶ್ರೀಮಾನರು ದಕ್ಷಿಣ ಭಾರತ ಪ್ರವಾಸ ಹೋಗಿದ್ದಾರೆ' ಎಂದು ಹೇಳಿಬಿಟ್ಟ. ಮಾಣಿಯ ಉತ್ಸಾಹ ಉಡುಗಿ ಹೋಯಿತು. ಆಳಿನ ಮಾತನ್ನು ನಂಬಲಾರದೆ ನಂಬಲು ಇಚ್ಛಿಸದೆ-ಮತ್ತೆ ಮತ್ತೆ ಕೇಳಿದ, ಅದೇ ಉತ್ತರ. ಖಿನ್ನನಾಗಿ

"ನಡೆ ಅವನೀ. ಮಲ್ಲಿಕ್ ಅರಮನೆಗಾದರೂ ಹೋಗೋಣ." ಎಂದು ಹೇಳಿದ. ಗೆಳೆಯರಿಬ್ಬರೂ ಅರಮನೆ ಸೇರುವ ಹೊತ್ತಿಗೆ ಅಲ್ಲಿನ ಬಾಗಿಲು ಮುಚ್ಚಲ್ಪಡುತ್ತಿತ್ತು. ಈ ಎರಡನೆಯ ಆಶಾಭಂಗಕ್ಕೆ ಮಾಣಿಯ ಉತ್ಸಾಹ ಮತ್ತಷ್ಟು ಉಡುಗಿ ಹೋಯಿತು. ಮನಸ್ಸಿನಲ್ಲಿ ಬಗೆಬಗೆಯ ಭಾವನೆಯ ಬಳ್ಳಿಗಳು ವಿಪರೀತವಾಗಿ ಸುಳಿಯಲಾರಂಭಿಸಿದವು. ಸ್ವಲ್ಪ ದೂರ ನಡೆದಾನಂತರ ಅವನೀಶನನ್ನು ಕುರಿತು,

"ಅವನೀ. ಇಂದೇ ರಾತ್ರಿ ನಾನು ಶಾಂತಿನಿಕೇತಕ್ಕೆ ಹೊರಟು ಬಿಡುತ್ತೇನೆ."

"ಯಾರಾದರೂ ನಿನ್ನನ್ನು ಹುಚ್ಚನೆಂದಾರು ಮಾಣಿ. ಇಷ್ಟು ಸಣ್ಣ ವಿಚಾರಗಳಿಗೆಲ್ಲಾ ಮನಸ್ಸು ಹಾಕಿದರೆ ಹೇಗೆ ಹೇಳು-ಮುಂದೆ ನೀನು ಏಳ್ಗೆಯಾಗುವುದಾದರೂ ಹೇಗೆ ?"

"ಗಂಗೂಲಿಯವರ ದರ್ಶನ ದೊರೆಯದಿರುವುದು ನನ್ನನ್ನು ಬಹಳ ನಿರಾಶಗೊಳಿಸಿದೆ."

"ಅಯ್ಯೋ ಹುಚ್ಚಾ, ಮುಂದಿನ ಸಲ ಬಂದಾಗ ನೋಡಿದರಾಯಿತು. ಅದಕ್ಕಿಷ್ಟು ವ್ಯಥೆಯೇ ? ನಾನು ಹೇಳಿದ್ದು ಮರೆತೆಯಾ ?-ಎಂಟು ಗಂಟೆಗೆ ನಿನ್ನ ದರ್ಬಾರು ಪರಿಸಮಾಪ್ತಿಯಾಗಿ ಬಿಡಬೇಕು."

"ಆ ಮೇಲೆ ಎಲ್ಲಿಗೆ ಹೋಗುವುದು ?"

"ಅದು ಈಗೇತಕ್ಕೆ ? ಮುಂದೆ ನಿನಗೇ ಗೊತ್ತಾಗುವುದು."

ಎಂಟು ಘಂಟೆಗೆ ಇನ್ನೂ ಒಂದು-ಒಂದೂವರೆ ಗಂಟೆಯಷ್ಟು ಅವಧಿಯಿತ್ತು. ಮಾಣಿ ನಗರದ ಸೂಕ್ಷ್ಮ ಪರಿಚಯಕ್ಕೆ ಹೊರಟ. ನಿರುದ್ಯೋಗಿಗಳಾಗಿ ಅಲ್ಲಿ ಇಲ್ಲಿ ಗುಂಪು ನಿಂತು ಹೋಗಿ ಬರುವವರನ್ನೇ ಎವೆಯಿಕ್ಕದೆ ನೋಡುವವರ ತಂಡ ಒಂದು ಕಡೆ; ಔಷಧಿ ಪಥ್ಯಗಳನ್ನು ಮಾರುವವರು ಮಾಡುತ್ತಿದ್ದ ಯಕ್ಷಿಣಿ ಆಟವನ್ನು ನೋಡುತ್ತ ನಿಂತಿದ್ದವರ

ತಂಡ ಒಂದು ಕಡೆ; ಸುಪಾರಿ ಅಂಗಡಿಗಳ ಮೇಲೆ ಕುಳಿತು ವ್ಯಾಪಾರಕ್ಕೆ ಬಂದವರ ಮುಖವನ್ನೇ ದಿಟ್ಟಿಸಿ ನೋಡಿ ಕೊಟ್ಟ ಕಾಸನ್ನು ಲಕ್ಷಿಸದೆ ಅವರು ಹೆದರಿ ಓಡಿಹೋಗುವಂತೆ ಮಾಡುತ್ತಿದ್ದವರ ಸಣ್ಣ ಪುಟ್ಟ ತಂಡವನ್ನು ನೋಡುತ್ತಾ ಮಾನವಾಯುಷ್ಯದ ದುರ್ವ್ಯಯವನ್ನು ಆಲೋಚಿಸುತ್ತಾ ಹೊರಟ.

ಅಲೆದಲೆದು ಆಯಾಸವೂ ಆಗುತ್ತಬಂತು; ಮಾಣಿಯ 'ದರ್ಬಾರ್' ಮುಗಿಯುವ ಹೊತ್ತೂ ಬಂತು. ಅವನೀಶ ಮಾಣಿಯನ್ನು ನೋಡಿ

"ಇನ್ನೂ ಏನಾದರೂ ಕೆಲಸವಿದೆಯೇ ಮಾಣಿ.?

"ಕೆಲಸವೇನು ಬಂತು. ಈಗೆಲ್ಲಿಗೆ ಹೋಗೋಣ. ಯಾವದಾದರೂ ನಾಟಕವಿದೆಯೇನಯ್ಯ?"

"ಬೇಕಾದಷ್ಟಿದೆ."

"ಬಹಾದೂರಿಯ ನಾಟಕ ಯಾವುದಾದರೂ ಇದೆಯೇನು? ಆತ ಉತ್ತಮ ನಟ ಎಂದು ಕೇಳಿ ಬಲ್ಲೆ. ಹೋಗೋಣವೇನು?"

"ಹೋಗೋಣ. ಆದರೆ ಇಂದು ಬೇಡ....ಇಂದು ನಿನಗೆ ದೊಡ್ಡ ಹಬ್ಬವನ್ನೇರ್ಪಡಿಸಿರುವೆ. ನಾಳೆ ಹೋಗೋಣ ನಾಟಕಕ್ಕೆ" ಎಂದು ಹೇಳುತ್ತಾ ಎದುರಿಗೆ ಹೋಗುತ್ತಿದ್ದ ಟ್ರಾಂ ಗಾಡಿಯನ್ನು ಮಾಣಿಯೊಂದಿಗೆ ಹತ್ತಿದ. ಅದು ಅಲ್ಲಿ ಸುತ್ತಿ ಇಲ್ಲಿ ಸುತ್ತಿಕೊನೆಗೆ ಎಲ್ಲಿಯೋ ನಿಂತಿತು. ಅವನೀಶ ಇಳಿದ. ಜತೆಗೆ ಮಾಣಿಯೂ ಇಳಿದ. ತಾನು ಎಲ್ಲಿಗೆ ಬಂದಿರುವೆನೆಂಬುದರ ಅರಿವೇ ಮಾಣಿಗಿಲ್ಲ. ಮಾತನಾಡದೆ ಅವನೀಶನನ್ನು ಅನುಸರಿಸುತ್ತಾ ನಡೆದ. ಕೃಷ್ಣಪಕ್ಷದ ಆ ಭಯಂಕರ ರಾತ್ರಿ ಬಹುಜನ ಸುಳಿಯದ ಆ ಬೀದಿಗೆ ಒಂದು ಬಗೆಯ ಹಿನ್ನೆಲೆಯನ್ನಿತ್ತಿತ್ತು. ರಸ್ತೆಗೆ ಸಾಕಷ್ಟು ದೀಪಗಳಿಲ್ಲದೆ ಸುಳಿಯುತ್ತಿದ್ದವರ ನೆರಳು ದೀರ್ಘವಾಗಿ ಬಿದ್ದು ದೂರದಲ್ಲಿ ಭೂತಪ್ರೇತಗಳ ನರ್ತನವಾಗುತ್ತಿದೆಯೋ ಏನೋ ಎಂದೆನ್ನಿಸುತ್ತಿತ್ತು. 'ತನ್ನನ್ನು ಇಂತಹ ರಾತ್ರಿಯಲ್ಲಿ....ಇಂತಹ ಜಾಗದಲ್ಲಿ.... ಇಂತಹ ವೇಳೆಯಲ್ಲಿ ಎಲ್ಲಿಗೆ ಕರೆದುಕೊಂಡು ಹೋಗುತ್ತಿರುವನು ಈ ಅವನೀಶ' ಎಂದು ಚಿಂತಿಸಿದ. ಬಗೆಹರಿಯದಾಯಿತು. ಧೈರ್ಯ ಮಾಡಿ ಅವನೀಶನನ್ನೇ ಕುರಿತು

"ಎಲ್ಲಿಗೆ ಅವನೀ, ಹೋಗುತ್ತಿರುವುದು."

"ನಿನಗೇತಕ್ಕೆ. ಸುಮ್ಮನೆ ಬಾ. ಎಲ್ಲವೂ ತಾನೇ ತಾನಾಗಿ ಗೊತ್ತಾಗುವುದು" ಎಂದು ಪಕ್ಕದ ಸಂದಿಗೆ ತಿರುಗಿದ. ಸ್ವಲ್ಪ ದೂರ ಅಲ್ಲಿ ನಡೆದು ಮತ್ತೆ ಒಂದು ಸಂದಿಗೆ ತಿರುಗಿದ. ಈ ವಕ್ರ ವಕ್ರ ಸಂದಿಗಳ ಪೂರ್ಣಜ್ಞಾನ ಅವನೀಶನಿಗೆ ಹೇಗಾಯಿತು ಎಂಬ ಶಂಕೆ. ಮತ್ತೆ 'ಎಲ್ಲಿಗೆ ಹೋಗುತ್ತಿರುವುದು ?' ಎಂಬ ಪ್ರಶ್ನೆ. ಮುಂದೆ ಮುಂದೆ ಹೋಗುತ್ತಾ ಮಾಣಿ ಎದೆ ಗಟ್ಟಿಯಾಗಿ ಬಡಿದುಕೊಳ್ಳಲಾರಂಭಿಸಿತು. ಹೋಗಲು ಹಿಂಜರಿದರೆ ಅವನೀಶ ತನ್ನನ್ನು ಹೇಡಿಯೆಂದು ಎಲ್ಲಿ ಕರೆಯುವನೋ ಎಂಬ ಹೆದರಿಕೆ. ಹೋಗಲು ಹೆದರಿಕೆ. ಮತ್ತೆ ಧೈರ್ಯಮಾಡಿ

"ಎಲ್ಲಿಗೆ ನಾವು ಹೋಗುತ್ತಿರುವುದು ಅವನೀಶ್ ? ಸುಖವಾಗಿ ಬಹಾದೂರಿಯ ನಾಟಕಕ್ಕಾದರೂ ಹೋಗಿದ್ದರೆ ಚೆನ್ನಾಗಿರುತ್ತಿದ್ದಿತಲ್ಲಾ."

"ಅಯ್ಯೋ ಮೂಢಾ. ಬಹಾದೂರಿಯ ನಾಟಕ ಎಲ್ಲಿಗೆ ಹೋಗುತ್ತದಯ್ಯಾ—ಸುಮ್ಮನೆ ಬಾ. ಈವತ್ತಿನ ಅನುಭವವನ್ನು ನೀನು ಎಂದಿಗೂ ಮರೆಯುವುದಿಲ್ಲ."

"ಹಾಗೆಂದರೆ ?"

"ಹಾಗೆಂದರೆ ನಿನ್ನ ಕಲೆಯಲ್ಲಿರುವ ದೊಡ್ಡ ಕುಂದನ್ನು ಇವತ್ತಿನ ಅನುಭವ ಸರಿಪಡಿಸಿಕೊಡುವುದು. ಜೀವನವನ್ನು ಕಣ್ಣು ತೆರೆದು ನೋಡದೆ ಸುಮ್ಮನೆ ಶಾಂತಿನಿಕೇತನದ ಬರಡು ಪ್ರಕೃತಿಯನ್ನು ಚಿತ್ರಿಸುತ್ತ ಕುಳಿತರೆ ನಿನ್ನ ಕಲೆ ಮುಂದಕ್ಕೆ ಬರುವದೇನಯ್ಯಾ ?"

"ನಿನಗೆ ಯಾವದು 'ಬರಡು ಪ್ರಕೃತಿ'ಯೋ ಅದೇ ನನಗೆ ಕಳೆ ದುಂಬಿದ-ಜೀವದುಂಬಿದ ಆನಂದನಿಧಿ. ಅದನ್ನು ಸರಿಯಾಗಿ ಚಿತ್ರಿಸುವುದೇ ನನ್ನ ಜೀವನದ ಮಹದಾಶಯ"

"ಇದು ಕೇವಲ ಆತ್ಮವಂಚನೆಯ ಮಾತು ಮಾಣಿ, ನೀನು ಲಂಡನ್ ನಗರವನ್ನು ನಿಜವಾಗಿ ನೋಡದೆ ಚಿತ್ರದಲ್ಲಿ ಕಂಡು ಪ್ರತಿಚಿತ್ರ ಮಾಡಬಲ್ಲೆಯೇನು ?"

"ಮಾಡಬಲ್ಲೆ. ಆದರೆ ಅದು ಉತ್ತಮ ಕಲೆಯಾಗುವುದಿಲ್ಲ."

"ಹಾಗೆಯೇ ಜೀವನವನ್ನು ನೋಡದೆ ಚಿತ್ರಕಲೆಗೆ ಕೈ ಹಾಕುವುದು."

"ನಾನು ಪ್ರಕೃತಿಯನ್ನೇ ನೋಡಿ ಚಿತ್ರಿಸುವೆನಲ್ಲಾ. ಪ್ರಕೃತಿಯ ಚಿತ್ರವನ್ನು ಟರ್ನರ್, ಕಾನ್‌ಸ್ಟೇಬಲ್, ಕೋರೋಯವರ ಚಿತ್ರಗಳಲ್ಲಿ ನೋಡಿ ಚಿತ್ರಿಸಿದ್ದರೆ ನಿನ್ನ ಟೀಕೆ ಸಲ್ಲುತ್ತಿದ್ದಿತು."

"ಹಾಗಲ್ಲ ಮಾಣಿ. ಜಗತ್ತಿನಲ್ಲಿ ಪ್ರತಿಯೊಂದೂ ಮಾನವಾಧೀನ. ಮರವೇತಕ್ಕೆ ಸೃಷ್ಟಿಯಾಗಿದೆ? ಮನುಷ್ಯನಿಗೆ ಹಣ್ಣು, ಕಾಯಿ, ನೆರಳು, ಒಣಗಿದ ಮೇಲೆ ಸೌದೆಯನ್ನು ಒದಗಿಸುವುದಕ್ಕಾಗಿಯೇ ಅಲ್ಲವೇ? ಹೂವು ಏತಕ್ಕೆ ಸೃಷ್ಟಿಯಾಗಿದೆ? ಮನುಷ್ಯನ ವಿಲಾಸಕ್ಕೆ. ಬೆಟ್ಟ ಗುಡ್ಡಗಳೇತಕ್ಕೆ? ಮನುಷ್ಯ ತನ್ನ ನೆಲೆಯನ್ನು ಕಟ್ಟಿಕೊಳ್ಳುವುದಕ್ಕಾಗಿ, – ಹೀಗೆ ಪ್ರತಿಯೊಂದೂ ಮಾನವನ ಸುಖ, ವಿಲಾಸ, ಅನುಕೂಲಕ್ಕಾಗಿಯೇ ಸೃಷ್ಟಿಯಾಗಿದೆ. ಅಂದರೆ ಮಾನವ ಜೀವನಕ್ಕೆ ಇರುವಂತೆ ನಿನ್ನ ಗಿಡ ಮರ, ಬೆಟ್ಟಗುಡ್ಡ, ಸೂರ್ಯಾಸ್ತ ಸೂರ್ಯೋದಯಗಳಿಗೆ ಅಸ್ತಿತ್ವವೇ ಇಲ್ಲ. ನಾವು ಗಾನವನ್ನು ಕಲಿಯಬೇಕೆಂದು ಸಂಕಲ್ಪಿಸಿದರೆ ಹೇಗೆ ಗಾಯಕನಲ್ಲಿ ಹೋಗುವೆವೋ ಹಾಗೆ ಗಾನಯಂತ್ರಗಳನ್ನು ಮಾಡುವವನಲ್ಲಿ ಏತಕ್ಕೆ ಹೋಗುವುದಿಲ್ಲ? ಇನತ್ತು ಪ್ರಕೃತಿಯನ್ನು ನೀನು ಚಿತ್ರಿಸಬೇಕಾದರೆ ಪ್ರಕೃತಿ ಯಾರಿಗಾಗಿ ಸೃಷ್ಟಿಯಾಗಿದೆಯೋ ಅವರಲ್ಲಿ ಹೋಗಬೇಕು."

"ಅಂದರೆ."

"ಪುರುಷ ಸ್ತ್ರೀಯಲ್ಲಿ; ಸ್ತ್ರೀ ಪುರುಷನಲ್ಲಿ" ಎಂದು ಹೇಳುತ್ತಿರುವಂತೆ ಒಂದು ಬಾಗಿಲ ಬಳಿ ಬಂದು ನಿಂತು ಅದನ್ನು ತಟ್ಟಿದ. ಎಲ್ಲಿಂದಲೋ ಕೋಮಲವಾದ ಎಳೆಯ ಶಾರೀರದ ಸುಮಧುರ ಆಲಾಪನೆ ಕೇಳಿಬರುತ್ತಿತ್ತು. ಒಂದೆರಡು ನಿಮಿಷಗಳಾದನಂತರ ದೊಡ್ಡ ದಗಲೆಯ ಷರಾಯಿ ಧರಿಸಿದ್ದ ಒಬ್ಬ ಸ್ಥೂಲ ಮನುಷ್ಯ ಸ್ವಾಗತ ಬಯಸಿ ಒಳಗೆ ಕರೆದೊಯ್ದು ಕುಳ್ಳಿರಿಸಿದ.

ವಿಶಾಲವಾದ ಸಭಾಮಂದಿರ. ನೆಲ ಮುಚ್ಚುವಂತೆ ಹಾಸಿರುವ ದೊಡ್ಡದಾದ ಜಮಖಾನದ ಮೇಲೆ ಅಲ್ಲಿ ಇಲ್ಲಿ ಒಂದೊಂದು ರತ್ನಗಂಬಳಿ. ಗೋಡೆಗಳನ್ನು ಅಪ್ಪಿರುವಂತೆ ಮೆತ್ತನೆಯ ಒರಗು ದಿಂಬುಗಳು. ಅಲ್ಲಲ್ಲಿ ಒಂದೊಂದು ಗುಡುಗುಡಿ; ಮಧ್ಯೆ ಮಧ್ಯೆ ಒಂದೊಂದು ಪಾನ್

ಸುಪಾರಿಯ ಪೆಟ್ಟಿಗೆ. ಗೋಡೆಗಳ ಮೇಲೆ ಅಗ್ಗದ ಚಿತ್ರದ ಅಂಗಡಿಗಳಲ್ಲಿ ದೊರೆಯುವ ಪಿತ್ತಲೆಯ, ಅರೆಪಿತ್ತಲೆಯ ಬೊಂಬೆಗಳು.

ಅವನೀಶ, ಮಾಣಿ ಪ್ರವೇಶಿಸಿದಾಗ ಪ್ರೇಮದಾಸಿಯ ಗಾನ ಒಳ್ಳೆಯ ಹುರುಪಿನಿಂದ ಸಾಗಿತ್ತು. ಬಾಗಿಲೆದುರಾಗಿ ಸರಿಯಾಗಿ ಗಾಯಕಳು, ಅವಳ ಅಕ್ಕ ಪಕ್ಕದಲ್ಲಿ ೧೮-೨೦ ಕ್ಕೆ ಮೀರದ ಇಬ್ಬರು ಸುಂದರಿಯರು ಘನವಾದ ಎರಡು ತಂಬೂರಿಗಳನ್ನು ಮೀಟುತ್ತ ಕುಳಿತಿದ್ದರು. ಅವರ ಹಿಂದೆ ಇಸ್ರಾಜ್, ಸಾರಂಗಿ, ತಬಲಗಳನ್ನು ಬಾಜಿಸುತ್ತಾ ಮೂವರು ಮಂಡಿಸಿದ್ದರು. ಸಭೆ ಕಿಕ್ಕಿರಿಯದಿದ್ದರೂ ಇದ್ದ ನಾಲ್ವರು ಜನವೇ ಪ್ರೇಮದಾಸಿಯ 'ಪಹಡಿ' ರಾಗಾಲಾಪನೆಗೆ ತಲೆದೂಗುತ್ತ ಕುಳಿತಿದ್ದರು. ಇಪ್ಪತ್ತೆರಡು ಇಪ್ಪತ್ತುನಾಲ್ಕಕ್ಕೆ ಮೀರದ ವಯಸ್ಸು, ಕಪ್ಪು ಹಚ್ಚಿದ ಆಳವಾದ ವಿಶಾಲವಾದ ಕಣ್ಣುಗಳು. ತುಂಬಿದ ಕೆನ್ನೆಗಳಿಗೆ ಒಪ್ಪುತ್ತಿದ್ದ ನಸುನೀಳವಾದ ನಾಸಿಕ. ಕೋರೆಬೈತಲೆಗೆ ಸರಿಯಾಗಿ ತಿದ್ದಿದ ಮುಂಗುರುಳು. ಕೇಸರಿ ಬಣ್ಣದ ಸೀರೆ ಕುಪ್ಪಸ ಧರಿಸಿ ಆಗಾಗ್ಗೆ ನಯವಾಗಿ 'ಸಮ'ವನ್ನು ಸೂಚಿಸುತ್ತಿದ್ದ ಹಾವಭಾವಗಳಿಗೆ ಗಾನಲೋಲುಪರು ಬೆರಗಾಗಿ ಕುಳಿತಿದ್ದರು. ಅವನೀಶನನ್ನು ಮುಗುಳ್ನಗೆಯಿಂದಲೇ ನಮಸ್ಕರಿಸಿ ಪ್ರೇಮದಾಸಿ ತನ್ನ ಬಲ ಭಾಗದಲ್ಲಿದ್ದ ರತ್ನಗಂಬಳಿಯ ಮೇಲೆ ಕುಳ್ಳಿರೆಂದು ಸೂಚಿಸಿದಳು. ಮಾಣಿ ತನ್ನ ಮುಂದಿದ್ದ ದೃಶ್ಯವನ್ನು ನೋಡಿ ಚಕಿತನಾದ. ಮಾತನಾಡಲು ಬಾರದು; ಅದು ಸಮಯವೂ ಅಲ್ಲ. ತುಂಟ ಮಗು ಅಪ್ಪನಿಗೆ ಹೆದರಿ ಅಮ್ಮನನ್ನು ಆಶ್ರಯಿಸಿ ಕುಳಿತುಕೊಳ್ಳುವಂತೆ ಅವನೀಶನ ಸಮೀಪದಲ್ಲಿ ಕುಳಿತ. ಅವನೀಶನೊಮ್ಮೆ ಮಾಣಿಯ ಕಡೆ ತಿರುಗಿನೋಡಿ ಅವನ ಅಂತಸ್ತಾಪವನ್ನು ಗ್ರಹಿಸಿ ಅರ್ಥಗರ್ಭಿತವಾಗಿ ನಕ್ಕು ಸಂಗೀತವನ್ನು ಕೇಳುತ್ತಾ ಕುಳಿತ.

ಪಹಡಿ ಮುಗಿಯಿತು. ಗಾನ ಕೇಳುತ್ತಿದ್ದ ಒಬ್ಬ ರಸಿಕ ಹತ್ತು ರೂಪಾಯಿನ ಒಂದು ನೋಟನ್ನೆಸೆದು

"ಒಂದು ಬಿಲಾವಲ್ ಅಪ್ಪಣೆಯಾಗಲಿ" ಎಂದು ಹೇಳಿದ. ಗಾಯಕಳು ನಗುತ್ತಾ ಅವನನ್ನು ಉದ್ದೇಶಿಸಿ

"ಮಹಾರಾಜ್, ಇದು ಬಿಲಾವಲ್ ರಾಗವನ್ನು ಹಾಡುವ ವೇಳೆಯಲ್ಲ. ಸಮಯಕ್ಕೊಪ್ಪುವ ಯಾವ ರಾಗವನ್ನು ಸೂಚಿಸಿದರೂ ಹಾಡುವೆ" ಎಂದು ತನ್ನ ಕಟಾಕ್ಷವೀಕ್ಷಣವನ್ನು ಅವನೀಶನ ಕಡೆ ಬೀರಿದಳು. ಅವನೀಶನು ನಗುತ್ತಾ

"ಹಾಗಾದರೆ ಬಾಗೇಶ್ರಿಯಾಗಲಿ" ಎಂದ.

ಬಾಗೇಶ್ರೀ ರಾಗವಾರಂಭವಾಯಿತು. ಮಾಣಿಯ ಮನಸ್ಸಿನಲ್ಲಿ ಬಗೆ ಬಗೆಯ ಭಾವತರಂಗಗಳು ನಾಟ್ಯವಾಡಲಾರಂಭಿಸಿದವು. ಮೊದಲೇ ಮಧುರವಾದ ರಾಗಕ್ಕೆ ಮಧುರವಾದ ಕಂಠದ ಇಂಬು ದೊರೆತು ಅದು ಅಪೂರ್ವ ವೈಖರಿಯಿಂದ ರಂಜಿಸಲಾರಂಭಿಸಿತು. ಪ್ರೇಮದ ಕೋಮಲ ಅಂತರಂಗ ಅವನೆದುರಿಗೆ ತೆರೆದಂತಾಯಿತು. ಈ ನಿವೇದನ ತನಗಾಗಿಯೇ ಇರಬಹುದೇ? ಮಾತಿನಿಂದ ಹೇಳಲಾಗದುದನ್ನು ಪ್ರೇಮದಾಸಿ ಬಾಗೇಶ್ರೀಯಿಂದ ಸೂಚಿಸುತ್ತಿರಬಹುದೇ? ಎಂದು ಯೋಚಿಸಿದ. ಮರು ಕ್ಷಣವೇ ಎದುರಿಗೆ ತನ್ನಂತೆಯೇ ಗಾನವನ್ನು ಕೇಳುತ್ತಾ ತಲೆದೂಗುತ್ತಿದ್ದವರ ಕಡೆಗೆ ಗಮನ ಜಾರಿತು. 'ಅವರೂ ನನ್ನ ಹಾಗೆಯೇ ಕನಸು ಕಾಣುತ್ತಿರ ಬಹುದೇನೋ' ಎಂದು ಸುಮ್ಮನಾದ.

ಬಾಗೇಶ್ರೀಯಿಂದ ಅಸಾವೇರಿಯ ಕಡೆಗೆ ಪ್ರೇಮದಾಸಿಯ ಗಾನ ತೇಲಿತು. ಆ ರಾಗದಲ್ಲಿ ಮೂಡಿಪ್ಪ ದೈನ್ಯ ಮಾಣಿಯ ಕರುಳನ್ನು ಚುಚ್ಚಿತು. 'ಇಲ್ಲ, ನಾನು ಭಾವಿಸಿದ್ದು ತಪ್ಪು. ಇಷ್ಟು ಜನ ಎಷ್ಟು ಬಗೆಯಾಗಿ ಭಾವಿಸಿದರೂ ಪ್ರೇಮದಾಸಿ ನನಗಾಗಿಯೇ ಇವುಗಳನ್ನೆಲ್ಲಾ ಹಾಡು ತ್ತಿರುವುದು. ಈ ಅಸಾವೇರಿಯ ಕಳಕಳಿಯ ಹೃದಯ ನಿವೇದನೆ ನನಗಾಗಿಯೇ' ಎಂದು ತಳಮಳಗೊಂಡ.

ಮಾಣಿಯ ಜೀವನ ಅಂದು ಒಂದು ವಿಶೇಷವಾದ ಅನುಭವಕ್ಕೆ ಒಳಗಾಯಿತು. ತನ್ನಲ್ಲಿ ಸುಪ್ತವಾಗಿದ್ದ ಯಾವದೋ ಚೇತನ ನಿದ್ರೆಯಿಂದೆದ್ದ ಸಿಂಹದಂತೆ ಎದ್ದುದನ್ನು ಕಂಡ. ಜೀವನವನ್ನು ಚಿತ್ರಕಲೆಯ ಮೂಲಕ ಕಂಡಿದ್ದ ಅವನಿಗೆ ಚಿತ್ರಕಲೆಯನ್ನು ಜೀವನದ ಮೂಲಕ ಕಾಣ ಬೇಕೆಂಬ ಆಶೆ ಆಗಲೇ ಉದಿಸಿತು. ಜ್ವರಸಂತಪ್ತನಂತೆ ಉದ್ವಿಗ್ನ ನಾದ. ಮುಖವೆಲ್ಲಾ ಬೆವರಲಾರಂಭವಾಯಿತು. ತನ್ನ ಮನಸ್ಸಿನ

ವಿಕ್ಷೋಭೆಯನ್ನು ಯಾರಿಗೂ ತೋರಗೊಡದಂತೆ ಯತ್ನಿಸುತ್ತಾ ಕುಳಿತ.

ಅವನೀಶನ ಒಂದು ಕಣ್ಣು ತನ್ನ ಮೇಲೆಯೇ ಇದ್ದುದು ಮಾಣಿಗೆ ಗೊತ್ತಿಲ್ಲ. ಮಾಣಿಯ ಅಂತರಂಗದಲ್ಲಿ ನಡೆಯುತ್ತಿದ್ದ ಕದನ ಬಹು ಸೂಕ್ಷ್ಮವಾಗಿ ಅವನೀಶನ ಮುಂದೆ ಚಿತ್ರಿತವಾಗುತ್ತಿತ್ತು. ಸರಳ ಹೃದಯದ ತನ್ನ ಮಿತ್ರ ಹೇಗೆ ಜೀವನವನ್ನು ಕಂಡು ಅದರ ಮಹಾಸಮಸ್ಯೆಯನ್ನು ಎದುರಿಸಲಾರದೆ ತತ್ತರಿಸುತ್ತಿದ್ದಾನೆಂಬುದನ್ನು ನೋಡುತ್ತಾ ಅವನೀಶ ಚಿಂತಾಪರವಶನಾದ.

ಪ್ರೇಮದಾಸಿ ಹಿಂದೂಸ್ಥಾನಿ ಭೈರವಿಗೆ ಬಂದಳು. ಭೈರವಿಯ ಗಂಭೀರ ಝೇಂಕೃತಿ ಶೋತೃಗಳನ್ನು ಮುಗ್ಧರನ್ನಾಗಿ ಮಾಡಿತು. ಒಬ್ಬೊಬ್ಬರಾಗಿ ತಮ್ಮ ಟೋಪಿ ರುಮಾಲು ಧರಿಸಿ ಸರಿಪಡಿಸಿಕೊಳ್ಳುತ್ತ ಕುಳಿತರು. ರಾಗ ಮುಗಿಯಿತು. ಶ್ರೋತೃಗಳು ಒಬ್ಬೊಬ್ಬರಾಗಿ ನಮಸ್ಕರಿಸಿ ತಮ್ಮ ಕಾಣಿಕೆಯನ್ನರ್ಪಿಸಿ ಹೊರಟರು. ಅವನೀಶ ಮಾತ್ರ ಏಳುವ ಯಾವ ಚಿಹ್ನೆಯೂ ಕಂಡುಬರಲಿಲ್ಲ. ಮಾಣಿ ಎಲ್ಲರಂತೆ ಟೋಪಿ ಧರಿಸಿದ್ದ. ಅವನೀಶನ ಆಲಸ್ಯ ಕಂಡು

"ಇನ್ನಾದರೂ ಹೋಗೋಣವೇ ಅವನೀ."

"ಎಲ್ಲಿಗೆ?"

"ನೀನು ನಿಮ್ಮ ಮನೆಗೆ--ನಾನು ಮೈಸೂರು ಗೆಳೆಯರಲ್ಲಿಗೆ."

"ಸರಿ. ಈಗ ಗಂಟೆ ಎಷ್ಟು ಗೊತ್ತೋ?"

"ಹನ್ನೊಂದೋ ಹನ್ನೆರಡೋ ಇರಬಹುದು."

"ಒಂದರ ಸಮಯ. ಭವಾನಿಪುರಕ್ಕೆ ಇಲ್ಲಿಂದ ಆರೇಳು ಮೈಲಿಗಳ ಮೇಲಾಗುತ್ತದೆ. ನೀನು ಹೇಗೆ ಹೋಗುವೆ.

"ಹಾಗಾದರೆ ಏನು ಮಾಡಲಿ?"

"ಇಲ್ಲೇ ಮಲಗು. ಬೆಳಿಗ್ಗೆ ಎದ್ದು ಹೋದರಾಯಿತು."

ಮಾರುತ್ತರ ಕೊಡಲಾರದೆ ಮೂಕನಂತೆ ಕುಳಿತ. ಪ್ರೇಮದಾಸಿ ತನ್ನ ಮುಂದೆ ಬಿದ್ದಿದ್ದ ಹಣದ ರಾಶಿಯನ್ನು ಸಂಗ್ರಹಿಸಿಕೊಂಡು 'ಈಗಲೇ ಬರುವೆ' ಎಂದು ವಿನಯದಿಂದ ಹೇಳಿ ತನ್ನ

ತಂಗಿಯರೊಂದಿಗೆ ಒಳಗೆ ಹೋದಳು. ವಾದ್ಯಗಾರರೂ ಎದ್ದು ಹೋದರು. ಇದೇ ಸಮಯ ಕಾಯುತ್ತಿದ್ದ ಮಾಣಿ

"ಇವರು ಯಾರು ಅವನೀ."

"ಗೊತ್ತಾಗಲಿಲ್ಲವೇ ಮಂಕೂ. ನನ್ನ ನಲ್ಲೆಯರು."

"ಅಂದರೆ........?"

"ಅಂದರೆ...." ಎಂದು ಎಡಗಣ್ಣನ್ನು ಅರ್ಥಗರ್ಭಿತವಾಗಿ ಮಿಟುಕಿಸಿದ. ಮಾಣಿಯ ಯೋಚನೆಯನ್ನು ಕಂಡು ಅವನೀಶನೇ

"ಏನು ಹೇಳುತ್ತೀ ಮಾಣಿ. ಜೀವನವನ್ನು ನೋಡ ಬಯಸುವೆಯೋ ? ನನಗೆ ಪ್ರೇಮ....ನಿನಗೆ....? ಈಗಲೇ ಹೇಳು."

"ನೀನು ಎಲ್ಲವನ್ನೂ ಮೊದಲೇ ಸಂಚುಮಾಡಿರುವ ಹಾಗಿದೆ. ತುಂಟಾ...."

ಮುಂದೇನೋ ಹೇಳಬೇಕೆನ್ನುವಷ್ಟರಲ್ಲಿಯೇ ಸೇವಕ ಒಂದು ತಟ್ಟೆಯಲ್ಲಿ ಹಣ್ಣುಗಳನ್ನು, ಇನ್ನೊಂದರಲ್ಲಿ ಟೀ ಸೆಟ್ಟನ್ನು (Tea-Set) ತಂದು ಮುಂದಿಟ್ಟ. ಅವನೀಶ ಗಂಭೀರವಾಗಿ ಕಿಸೆಯಿಂದ ಎಂಟಾಣೆಯ ನಾಣ್ಯವೊಂದನ್ನು ತೆಗೆದು ಅವನ ಮುಂದೆಸೆದು

"ಬೇಗ ಬರಬೇಕೆಂದು ಬಾಯಿ - ಸಾಹೇಬಾ ಅವರಿಗೆ ಹೇಳು." ಎಂದು ಆಜ್ಞಾಪಿಸಲು ಸೇವಕ ಸಲಾಮು ಹಾಕುತ್ತ ಹಿಂದೆರಳಿದ. ಸ್ವಲ್ಪ ಹೊತ್ತು ಹಣ್ಣಿನ ಸೇವನೆಯಲ್ಲಿ ಕಾಲಕಳೆಯಿತು. ಅವನೀಶ ಮತ್ತೆ ಕೆಣಕುವ ರೀತಿಯಲ್ಲಿ ನಗುತ್ತಾ

"ಏನು ಮಾಣಿ. ನಿನ್ನ ಪಾತಿವ್ರತ್ಯಕ್ಕೆ ಭಂಗಬರುವುದೆಂದು ಚಿಂತಿಸುವೆಯೋ ?"

"ಗಂಡಸರಿಗೆ ಪಾತಿವ್ರತ್ಯವೆಂಥದೋ ? ಹುಚ್ಚನಂತೆ ಮಾತ ನಾಡುವೆಯಲ್ಲಾ."

"ಪಾತಿವ್ರತ್ಯ ಎಂದರೆ ಬ್ರಹ್ಮಚರ್ಯಕ್ಕೆ ದೀರ್ಘದಂಡ ನಮಸ್ಕಾರ ಅಂತಾ - ಅದಕ್ಕಾಗಿ ಯೋಚನೆಯೇನು ?"

"ಅದಕ್ಕಲ್ಲಾ ಯೋಚನೆ. ಏನೂ ಅನುಭವವಿಲ್ಲನಲ್ಲಾ ಎಂದು ಯೋಚನೆ."

"ಹಾಗಾದರೆ ಧೈರ್ಯಮಾಡಿಕೋ. ಆ ಅನುಭವಕ್ಕೆ ಇದೇ ಯೂನಿವರ್ಸಿಟಿ. ನಿನಗೆ ಇವರು ಬೇಕಾದ ತಯಾರಿ ಕೊಡುತ್ತಾರೆ" ಎಂದು ಹೇಳುತ್ತಿರುವಂತೆ ಪ್ರೇಮದಾಸಿ ತನ್ನ ಒಬ್ಬ ತಂಗಿಯೊಂದಿಗೆ ಬಂದು ಕುಳಿತಳು. ಪರಸ್ಪರ ಪರಿಚಯವಾಯಿತು. ಎಲ್ಲರೂ ಟೀ ಸೇವನೆಗಾರಂಭಿಸಿದರು. ಪ್ರೇಮದಾಸಿ ಮಾತಿನ ಮಧ್ಯೆ

"ನೀವು ನನ್ನ ಮತ್ತು ನಮ್ಮ ರೂಪಳ ಭಾವಚಿತ್ರವನ್ನು ತೆಗೆದು ಕೊಡಬೇಕು" ಎಂದಳು.

"ಹಾಗೆಯೇ ಆಗಲಿ. ನಿಮ್ಮ ತಂಗಿಯ ಹೆಸರು ರೂಪಳೆಂದೇನು ?"

"ರೂಪದಾಸಿಯೆಂದು. ಏತಕ್ಕೆ ?"

"ಮನೋಹರವಾದ ಹೆಸರೆಂದು ಮೆಚ್ಚುತ್ತಿದ್ದೆ. ನೀವುಗಳು ದಾಸಿಯರೆಂದು ಏತಕ್ಕೆ ಕರೆದುಕೊಳ್ಳುವಿರಿ."

"ನಾವು ವೈಷ್ಣವರು. ನಮ್ಮಲ್ಲಿ ಹಾಗೆ ಕರೆದುಕೊಳ್ಳುವುದೇ ಪದ್ಧತಿ" ಎಂದು ಅವನೀಶನ ಕಡೆ ತಿರುಗಿದಳು. ಅವನು ಆಕಳಿಸುತ್ತ ಮೈಕೈ ಮುರಿಯುತ್ತ.

"ನನಗೆ ನಿದ್ದೆ ಬರುತ್ತಿದೆ. ಮಲಗೋಣವೆ ಮಾಣಿ" ಎಂದು ಹೇಳುತ್ತಲೇ ಎದ್ದು ಪ್ರೇಮದಾಸಿಯೊಂದಿಗೆ ಒಳಗೆ ತೆರಳಿದ. ಮಾಣಿಗೆ ದಿಕ್ಕೇ ತೋರದಂತಾಯಿತು. ಎದ್ದುನಿಂತು ತನ್ನೆದುರಿಗೆ ನಸುನಗುತ್ತಾ ಕೈನೀಡಿದ ರೂಪಳನ್ನು ಹಿಂಬಾಲಿಸಿದ.

ಆಳು ದೀಪಗಳನ್ನು ಆರಿಸಿ ಬಾಗಿಲುಹಾಕಿ ಹಜಾರದಲ್ಲಿ ಮಲಗಿದ.

ದೂರದಲ್ಲೆಲ್ಲೋ ಒಂದು ನಾಯಿ ಅತ್ತಂತೆ ಕೇಳಬಂತು. ಆಳು ಎದ್ದು ಹೊರಗೆ ಹೋಗಿ ಅದನ್ನು ಓಡಿಸಿ ಬಂದು ಮಲಗಿದ.

## ೧೨

ಬೆಳಿಗ್ಗೆ ಮಾಣಿ ಎದ್ದಾಗ ಬೆಳಕು ಹರಿದು ಎಷ್ಟೋ ಹೊತ್ತಾಗಿತ್ತು. ಸುಪ್ಪತ್ತಿಗೆಯ ಮೇಲೆ ಕುಳಿತು ಕಿಟಕಿಯಾಚೆ ಕಿರಿಯೌವನದಿಂದ ಮೆರೆಯುತ್ತಿದ್ದ ಅರೆಯರಳಿದ ಗುಲಾಬಿಯ ಹೂವೊಂದನ್ನು ನೋಡುತ್ತ ಮೈಮರೆತ. ಗಾಳಿಯ ವೇಗಕ್ಕೆ ಅದು ಸುತ್ತ ನಾಲ್ಕು

ಕಡೆ ಹಾರಾಡಿದರೂ ತನ್ನ ಕಡೆ ತಿರುಗಿದಾಗ ಏನೋ ಹೇಳಲು ಪ್ರಯತ್ನಿಸು ತ್ತಿದ್ದಂತಿತ್ತು. ತನ್ನ ಮನಸ್ಸಿನ ಭಾವನೆಯನ್ನು ತಿಳಿಸಲಾರದೆ ಅದು ಪೇಚಾಡುತ್ತಿದೆಯೋ – ಅದರ ಭಾವನೆಯನ್ನು ತಿಳಿಯಲಾಗದೆ ತಾನು ಪೆಚ್ಚಾಗಿದ್ದೇನೆಯೋ ಎಂದು ಮಾಣಿ ಯೋಚಿಸಲಾರಂಭಿಸಿದ. ಇಂದು ಜಗತ್ತನ್ನೆಲ್ಲಾ ಅಪಹಾಸ್ಯಮಾಡಿಕೊಂಡು ನಗುತ್ತಿರುವ ಚೆಂಗುಲಾಬಿಯ ಗತಿ ನಾಳೆ ಏನಾಗುವುದು ?—ಆ ಚಿತ್ರ ಮಾಣಿಯ ಮನಸ್ಸಿನ ಮೇಲೆ ಮೂಡಿತು. ಗುಲಾಬಿಯ ಗತಿಯನ್ನು ಯೋಚಿಸುತ್ತ ಯೋಚಿ ಸುತ್ತಾ ಮಾಣಿಯ ಗಮನ ತನ್ನ ಕಡೆಗೇ ತಿರುಗಿತು. ಹಿಂದಿನ ದಿನದ ಸಂಘಟನೆಗಳನ್ನೂ....ಅದರ ಹಿಂದಿನ ದಿನಗಳ ತನ್ನ ವಿದ್ಯಾರ್ಥಿದೆಶೆಯನ್ನೂ ಅವಕ್ಕೂ ಹಿಂದಿನ ದಿನಗಳ ತನ್ನ ದುಃಖಮಯ ಬಾಳನ್ನೂ ನೆನೆದ. ಜೀವನರಥವನ್ನು ಮುಂದು ಮುಂದಕ್ಕೆ ಸಾಗಿಸಿಕೊಂಡು ಹೋಗ ಬೇಕೆಂದು ಮಾಡುತ್ತಿದ್ದ ತನ್ನ ಸಾಹಸವನ್ನು ತಡೆಗಟ್ಟಿ ಹಿಂದುಹಿಂದಕ್ಕೆ ತಳ್ಳುತ್ತಿದ್ದ ಮಹಾಶಕ್ತಿ ಯಾವುದೆಂದು ಚಿಂತಿಸಿದ. ಬಗೆಹರಿಯ ದಾಯಿತು. ತನ್ನ ದೌರ್ಬಲ್ಯ ಮೂರ್ತಿಮತ್ತಾಗಿ ಎದುರಿಗೆ ಬಂದು ನಿಂತಂತಾಯಿತು. ಕಣ್ಣುಗಳಲ್ಲಿ ದುಃಖಬಿಂದುಗಳು.

ಅವನೀಶನ ವಾಣಿ ಕೇಳಬಂತು. ಹಿಂದಿನಿಂದ ಅವನೇ ಬಂದು ಮಾಣಿಯ ಬಳಿ ಕುಳಿತು ರಾತ್ರಿಯ ಅನುಭವವೇನಾಯಿತೆಂದು ಕೇಳಿದ. ತನ್ನ ಉಪಕಾರಕ್ಕೆ ಅವನು ನಿರೀಕ್ಷಿಸಿದ್ದುದು ಮಾಣಿಯ ಅನುಭವದ ಹಸಿ ಹಸಿ ಸುದ್ದಿ. ಆತುರನಾಗಿ ಮಾಣಿಯ ಮುಖವನ್ನು ನೋಡಿದ. ಕಳೆಗುಂದಿ, ದುಃಖತುಂಬಿದ ನೀರಸಮುಖ ಮಾಣಿಯದೇ ಹೌದೆಂದು ನಂಬಲು ಪ್ರಯತ್ನಿಸಿದ.

"ಏನು ಮಾಣಿ-ಬಹಳ ವ್ಯಸನಗೊಂಡಿರುವೆ. ಅನರ್ಥವೇನೂ....?"

"ಏನೂ ಇಲ್ಲ ಅವನೀ. ಅನರ್ಥವೇನು ಬಂತು? ಈಗ ಎಷ್ಟು ಗಂಟೆ ?"

"ಒಂಭತ್ತು ಆಗಿರಬಹುದು."

"ಮಧ್ಯಾಹ್ನದ ಗಾಡಿಯಲ್ಲಿ ಶಾಂತಿನಿಕೇತನಕ್ಕೆ ಹಿಂದಿರು ಗೋಣವೇ ?"

"ಏಕೆ! ಕಲ್ಕತ್ತೆ ಬೇಸರವಾಯಿತೇನು ?"

"ಬೇಸರವಲ್ಲ. ಒಂದು ಬಗೆ 'ಮನೆಯ – ಕಾಯಿಲೆ' ಬಂದಂತಾಗಿದೆ. ಸಂದಾಲಾಲರನ್ನು ನೋಡಬೇಕೆನಿಸಿದೆ."

"ಅದೆಲ್ಲಿ ಹೋಗುತ್ತದೆ ಪ್ರಾಣಿ. ರಜ ಮುಗಿದಮೇಲೆ ಇದ್ದೇಇದೆ. ಇನ್ನೇನು ರಜವೂ ಮುಗಿಯುತ್ತ ಬಂತಲ್ಲ. ನಾಳೆ ನಾಡಿದ್ದು ಬಿಟ್ಟು ಹೊರಡೋಣ."

"ಅಲ್ಲಿಯತನಕ ಏನು ಮಾಡುವುದು ?"

"ಏನು ಮಾಡುವುದು? ನಿನ್ನೆ ಏನೇನು ಮಾಡಿದೆವೋ ಅದನ್ನೇ ಮಾಡುವುದು. ನೀನು ಬಂಗಾಳಿ ನಾಟಕಗಳನ್ನು ನೋಡಬೇಕೆಂದೆ ಯಲ್ಲವೇ? ಇಂದು ಬಹಾದೂರಿಯ ನಾಟಕಕ್ಕೆ ಹೋಗೋಣ—ಪ್ರೇಮನೂ ಬರಬಹುದು – ಮತ್ತೆ – ನಿನ್ನ ಚಿತ್ರಗಳ ಮಾರಾಟವನ್ನು ಮರತೇ ಬಿಟ್ಟೆವಲ್ಲಾ."

"ಎಲ್ಲಿ ಮಾರಿಸುತ್ತಿ ?"

"ನಿನಗೇತಕ್ಕೆ ಆ ತಾಪತ್ರಯ. 'ಮಧುರ' ಪತ್ರಿಕೆಯ ಸಂಪಾದಕ ಸುರೇಶಬಾಬು ನನ್ನ ಗೆಳೆಯ. ಅವನ ತಲೆಗೆ ಕಟ್ಟಿದರಾಯಿತು. ಆದರೆ ಚಿತ್ರಗಳನ್ನು ಭವಾನಿಪುರದಲ್ಲಿ ಬಿಟ್ಟಿರುವೆಯೇನೋ ?"

"ಹೌದು."

"ಹಾಗಾದರೆ ನೀನೊಂದು ಕಾಗದ ಬರೆದುಕೊಡು. ಆಳಿನ ಕೈಲಿ ತರಿಸುವೆ. ಹಾಗೆಯೇ ನಿನ್ನ ಹಾಸಿಗೆ ಸಾಮಾನುಗಳನ್ನೂ ಕಳುಹಿಸಿರೆಂದು ಬರೆ."

"ಆದರೆ...."

"ಅದಕ್ಕೇನು? ಹೋಗುವ ಮುನ್ನ ಒಮ್ಮೆ ನೋಡಿ ಹೋದ ರಾಯಿತು."

ಅವನೀಶನ ಇಚ್ಛೆಯಂತೆ ಕಾಗದವನ್ನು ಬರೆದಿತ್ತು ಸೇವಕ ತಂದಿತ್ತ ಚಹಾ ಸವಿಯುತ್ತ ಕುಳಿತ. ಏಕಾಂಗಿಯಾಗಿ ತಾನಿದ್ದಾಗ ಬಂದ ಭಾವನೆಗಳೂ, ಮಾಡಿದ ನಿರ್ಧಾರಗಳೂ ಅವನೀಶನ ಮುಂದೆ ಏನಾಗುತ್ತವೆ? ಎಂಬ ಯೋಚನೆ ಹೊಳೆಯಿತು. ಅವನ ಮುಂದೆ

ತಾನು ಎಷ್ಟು ಸಣ್ಣವನಾಗಿ ಬಿಡುವೆ! ತನ್ನ ವ್ಯಕ್ತಿತ್ವ ಅವನ ಸಣ್ಣಪು ಮಾತುಗಳಲ್ಲಿ ಹೇಗೆ ಜಾರಿ ಹೋಗಿಬಿಡುತ್ತದೆ ಎಂದು ಚಿಂತಿಸಿದ.

ರೂಪ ಬಂದು ಮಾಣಿ ಕೈಯಲ್ಲಿದ್ದ ಟೀ ಪಾತ್ರೆಯನ್ನು ತೆಗೆದು ಕೊಂಡು ಕೆಳಗಿಟ್ಟಳು. ಅವಳ ಬರುವನ್ನು ಕಂಡು ಅರಳಿದ ಮುಖ ಅವಳು ಸಮೀಪಕ್ಕೆ ಬಂದು ಪಕ್ಕದಲ್ಲಿ ಕುಳಿತುಕೊಳ್ಳಲು ಹಾಗೆಯೇ ಮುದುಡಿಕೊಂಡಿತು. ರೂಪಳೇ ಮಾಣಿಯ ಕುತ್ತಿಗೆಯ ಮೇಲೆ ಕೈಹಾಕಿ ಅವನ ಕೈಯನ್ನೆತ್ತಿ ತನ್ನ ಕೊರಳ ಮೇಲೆ ಹಾಕಿಕೊಂಡಳು. ಅವಳ ಪ್ರೇಮಚೇಷ್ಟೆಗಳಿಗೆ ಒಲಿದವನಂತೆ ತೋರುತ್ತಾ ಮಧ್ಯೆ ಮಧ್ಯೆ ಇಣಿಕಿಣಿಕಿ ಅವಳ ಮುಖ ನೋಡಿದ.

ನಿನ್ನೆ ನೋಡಿದ ಆ ಮಿಂಚಿನಂತಹ ಕಣ್ಣುಗಳೆಲ್ಲಿ?—ಸಂಪಿಗೆ ಯಂತಹ ನಾಸಿಕವೆಲ್ಲಿ?—ಚಂದ್ರೋದಯದಂತಹ ಮುಗುಳ್ನಗೆಯೆಲ್ಲಿ?—ದೇಹದ ಕುಸುಮ ಕೋಮಲತೆಯೆಲ್ಲಿ?—ಮಲ್ಲಿಗೆಯ ಎಳೆಬಳ್ಳಿಯಂತಹ ಬಳುಕಾಟವೆಲ್ಲಿ?—ಹಾಲಿನ ಕೆನೆಯಂತಹ ಮೈಕಾಂತಿಯೆಲ್ಲಿ?—ಎಲ್ಲಿ?—ಎಲ್ಲಿ??—ಎಲ್ಲಿ??? ಮನಸ್ಸಿನಲ್ಲಿ ದುಗುಡವೇರುತ್ತ ಬಂದಿತು. ಎಷ್ಟು ನಿರೀಕ್ಷಿಸಿದರೂ ಪ್ರಶ್ನೆಗುತ್ತರವಿಲ್ಲ. ಅದಕ್ಕೆ ಬದಲು ಮಾಣಿಯ ಕನಸನ್ನು ಅಣಕಿಸುವ ಆಶೆಯನ್ನು ಮುರಿಯುವ ರೂಪಳ ಒಡೆದ ಮಡಿಕೆ ಯಂತಹ ದೇಹ. ವಿಕಾರವನ್ನು ಮುಚ್ಚಲುಮಾಡಿದ್ದ ವಿಚಿತ್ರವಿನ್ಯಾಸ. ಗ್ರಹಣ ಹಿಡಿದ ಚಂದ್ರನನ್ನು ಹೋಲುತ್ತಿದ್ದ ಕಾಂತಿಹೀನವಾದ ಕಂಗಳು; ಮುದಿತನ ಕಾಣಲು ವಯಸ್ಸೇ ಆಗಬೇಕೆಂಬ ಸಿದ್ಧಾಂತವನ್ನು ಪ್ರತಿಭಟಿ ಸುತ್ತಿದ್ದ ಸುಕ್ಕುಸುಕ್ಕಾದ ಮುಖ. ಒಣಗಿದ ಕಾಷ್ಠದಂತಿದ್ದ ಕೈಕಾಲು ಗಳು—ಏರಿಳಿತಗಳನ್ನು ಅರಿಯದ ಅವಳ ದೇಹದ ಭಾವವನ್ನು ನೋಡುತ್ತಾ ನೋಡುತ್ತಾ ನಿನ್ನಿನ ರಾತ್ರಿ ತನಗೆ ಕಾಮಶಾಸ್ತ್ರವನ್ನುಪದೇಶಿಸಿದ ಗುರು ಇವಳೇನೋ ಬೇರೆಯೋ ಎಂದು ಯೋಚಿಸಲಾರಂಭಿಸಿದ.

ತನ್ನ ಮಾತಿಗುತ್ತರಕೊಡದೆ ಮೂಕನಂತೆ ನೋಡುತ್ತ ಕುಳಿತಿದ್ದ ಮಾಣಿಯ ಮುಖ ಮುದ್ರೆಯನ್ನು ನೋಡಿ ರೂಪಳಿಗೆ ಬಹಳ ನಗೆ ಬಂತು. ಅವನನ್ನು ನೋಡಿ ಒಮ್ಮೆ ಅಣಕಿಸಿದಳು. ಮಾಣಿಗೂ ನಗೆ ಬಂತು.

ಸುಮ್ಮನಿದ್ದರೇ ಅಣಕಿಸುತ್ತಿದ್ದಂತೆ ಕಾಣುತ್ತಿದ್ದ ಮುಖದ ಮೇಲೆ ಅಣಕವೂ ತೇಲುವದಲ್ಲಾ ಎಂಬ ಆಶ್ಚರ್ಯದಿಂದ ನಕ್ಕು ಹಾಗೆಯೇ

"ಏನು ಬಂದಿರಿ ?"

"ಏಕೆ ಬರಬಾರದೇನು ?"

"ಬರಬಾರದು ಎಂದೆನೇನು ? ಈಗೇನು ಬಂದಿರಿ ಎಂದು ಕೇಳಿದೆ."

"ನಾವೇನು ಹಾಗಾದರೆ ಯಾವಾಗಲೂ ರಾತ್ರಿಯಲ್ಲೇ ಬರಬೇಕೇನು ?"

ಮಾಣಿಗೀಗ ನಿಜವಾಗಿ ನಗೆ ಬಂತು. ಸರಳವಾಗಿ ರೂಪಳ ಬಾಯಲ್ಲಿ ಬಂದ ಮಾತಿನಲ್ಲಿ ಎಷ್ಟು ಸತ್ಯವಿತೆಯೆಂದು ಚಿಕಿತನಾದ. ಮೊದಲಿನ ಬಿರುಸನ್ನು ಕಡಿಮೆ ಮಾಡಿ ಮಾರ್ದವದಿಂದ ಅವಳನ್ನು ನೇವರಿಸಿದ. ರೂಪಳ ಮುಖದಲ್ಲಿ ಮಿಂಚು ಸುಳಿದಂತಾಯಿತು. ಅಂತಃಕರಣದಿಂದ ಕೂಡಿದ ಅನುರಾಗದ ಮಹಿಮೆಯನ್ನು ಆ ಕ್ಷಣಾರ್ಧದಲ್ಲಿ ಗ್ರಹಿಸಿದ. ಮಿಂಚಿನ ಹೊಡೆತದಿಂದ ಚೇತರಿಸಿಕೊಂಡು ರೂಪ 'ಸ್ನಾನಕ್ಕೆ ಸಿದ್ಧವಾಗಿದೆ ಯೆಂದು ತಿಳಿಸಲು ಬಂದೆ' ಎಂದು ಕೈಗೊಂದು ಟವಲನ್ನಿತ್ತು ಮಾಣಿಯ ನ್ನೆಬ್ಬಿಸಿ ಬಚ್ಚಲುಮನೆಗೆ ಕಳುಹಿಸಿದಳು.

ಸೇವಕ ಮಾಣಿಯು ಸಾಮಾನುಗಳನ್ನು ತಂದು ರೂಪಳ ಕೋಣೆ ಯಲ್ಲಿಳುಹಿದ. ಅವುಗಳ ಜತೆಯಲ್ಲಿದ್ದ ಕಾಗದದ ಕಟ್ಟನ್ನು ಬಿಚ್ಚಿ ಚಿತ್ರಗಳನ್ನೊಂದೊಂದಾಗಿ ನೋಡುತ್ತ ಕುಳಿತಳು. ಒಂದೊಂದು ಚಿತ್ರವನ್ನು ನೋಡುತ್ತಾ ಅವಳ ಹೃದಯ ಹೆಮ್ಮೆಯಿಂದ ಉಬ್ಬುತ್ತಿತ್ತು. ಆ ಸೂರ್ಯಾಸ್ತ ಗಳು, ಸೂರ್ಯೋದಯಗಳು, ಆ ಸರಳವಾದ ಸಂತಾಲೀ ಜನರ ಜೀವನ ಚಿತ್ರಗಳನ್ನು ತಿರುವಿ ಹಾಕಿ ಓಂಕಾರದ ಮುಂದೆ ಮುರಲೀಮಗ್ನನಾಗಿ ನಿಂತಿದ್ದ 'ಶ್ಯಾಮಸುಂದರ'ನ ಚಿತ್ರವನ್ನು ನೋಡುತ್ತಾ ಕುಳಿತಳು. ಗತಿಯನ್ನು ಗಮನಿಸದೆ ಹುಚ್ಚು ಹಟಮಾರಿತನದಿಂದ ಹೊರಡುವ ನದಿಯ ವೇಗದಲ್ಲಿ ಕಣ್ಣುಗಳಿಂದ ಹನಿಗಳು ಹೊರಟವು. ಹೆಮ್ಮೆಯಿಂದ, ಆನಂದದಿಂದ, ಔನ್ನತ್ಯದಿಂದ ಅವಳ ಮನಸ್ಸೊಮ್ಮೆ ಹಿಗ್ಗಿದರೆ ಮರು ಕ್ಷಣವೇ ಅಪಾರವಾದ ದುಃಖದಿಂದ, ದುಗುಡದಿಂದ ಕೂಡಿದ ದುಮ್ಮಾನ ದಿಂದ ಕುಗ್ಗುವುದು. 'ಶ್ಯಾಮಸುಂದರ'ನ ಬದಲು ಓಂಕಾರದ ಹೃದಯ ಸ್ಥಳದಲ್ಲಿ ಮಾಣಿಯೇ ನಿಂತಂತೆ ಅವಳಿಗೆ ಭಾಸವಾಗುತ್ತಿತ್ತು.

ಮಾಣಿ ಸ್ನಾನವನ್ನು ತೀರಿಸಿಕೊಂಡು ಬಂದದ್ದೂ ಅವಳಿಗೆ ಗೊತ್ತೇ ಇಲ್ಲ. ಅವನೇ ಮೆಲ್ಲನೆ ಹಿಂದಿನಿಂದ ಬಂದು ಮೃದುವಾಗಿ 'ಪ್ಯಾರೀ – ರೂಪರಾಣಿ' ಎಂದ. ಬೆಚ್ಚಿ ಹಿಂದಿರುಗಿ ನೋಡಿ ಎದ್ದು ನಿಂತಳು. ಮಾಣಿಯನ್ನು ಮೆಲ್ಲನೆ ಹಾಸಿಗೆಯ ಮೇಲೆ ಕುಳ್ಳಿರಿಸಿ ತಾನು ಅವನ ಕಾಲಬಳಿ ಕುಳಿತಳು. ನೀರವತೆಯ ಅಧಿಕಾರ ಸ್ವಲ್ಪ ಹೊತ್ತು ನಡೆಯಿತು. ಅನಂತರ ಮಾಣಿಯ ಪಾದದ ಮೇಲೆ ಒಂದು ಬಿಸಿ ಹನಿ ಬಿದ್ದಂತಾಯಿತು. ಮೆಲ್ಲನೆ ರೂಪಳ ಕತ್ತೆತ್ತಿ ನೋಡಿದ. ದುಃಖದ ಮುಖ ಮುದುಡಿ ಹೋಗಿತ್ತು. ಮಾನವಸಹಜವಾದ ಅನುತಾಪದಿಂದ ಅವಳ ಕೈ ಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ತಲೆಯನ್ನು ನೇವರಿಸಿ ಮುದ್ದಿಸಿದ.

"ಪ್ಯಾರೀ, ಏತಕ್ಕೆ ಈ ಕಂಬನಿಯ ಕಾಲುವೆ ? ದುಃಖದ ಕಾರಣವನ್ನು ಹೇಳು."

ರೂಪಳಿಗೆ ದುಃಖ ಉಕ್ಕಿ ಬಂದಿತು. ಕಂಠ ಗದ್ಗದವಾಗಿ ಮಾತು ಹೊರಡದಂತಾಯಿತು. ಮಾಣಿ ಅನುನಯದ ನುಡಿಗಳಿಂದ ಸಂತೈಸಿ ಮತ್ತೆ ಮತ್ತೆ ದುಃಖದ ಕಾರಣ ಕೇಳಿದ. ರೂಪ ಕತ್ತೆತ್ತಿ. ನೋಡಿ, ಮಾಣಿಯ ಮುಖವನ್ನು ಕೈಯಲ್ಲಿ ಹಿಡಿದು ಮತ್ತೆ ಮತ್ತೆ ಮುದ್ದಿಸಿ ಅವನ ಭುಜದ ಮೇಲೊರಗಿ ತನ್ನ ಅಂತಸ್ತಾಪದ ಹೆಬ್ಬಾಗಿಲನ್ನು ತೆರೆದು ಬಿಟ್ಟಳು. ಮಾಣಿಗೆ ಈ ಸಮಸ್ಯೆ ಬಹಳ ಸೋಜಿಗವನ್ನುಂಟುಮಾಡಿತ್ತು. ಎದುರಿಗೆ ಹರಡಿ ಬಿದ್ದಿದ್ದ ತನ್ನ ಚಿತ್ರಗಳನ್ನು ನೋಡಿ 'ಇವುಗಳಿಗೂ ರೂಪಳ ದುಃಖಕ್ಕೂ ಏನಾದರೂ ಸಂಬಂಧವಿರಬಹುದೇ' ಎಂದು ಯೋಚಿಸಿದ. ಮತ್ತೊಮ್ಮೆ

"ಹೇಳು ರೂಪಾ, ಏಕಿಷ್ಟು ಚಿಂತೆ ?"

ರೂಪ ತನ್ನ ದುಃಖವನ್ನು ಅಡಗಿಸಿಕೊಂಡು

"ನಾನು ಮಹಾಪರಾಧಿ ಬಾಬುಜೀ. ನೀವು ಮಹಾನುಭಾವರು."

"ಹಾಗೆಂದರೇನು ರೂಪಾ ?"

"ನಿಮ್ಮ ಪವಿತ್ರ ದೇಹ ಮುಟ್ಟುವ ಅಧಿಕಾರ ನನಗಿಲ್ಲ. ಆದರೆ ಮುಟ್ಟಿದೆ ಕೆಡಿಸಿದೆ."

"ಛೆ! ಏನು ಮಾತು! ಕೆಡಿಸುವವರು ಯಾರು, ಕೆಡುವವರು ಯಾರು! ನೀನು ಹಾಗೆ ಮಾತನಾಡಿದರೆ ಯಾರಾದರೂ ಹುಚ್ಚಿ ಎಂದು ನಕ್ಕಾರು.?

"ನಗಲಿ ಬಾಬೂಜೀ. ನಾನು ನಿಜವಾಗಿಯೂ ಹುಚ್ಚಿಯೇ ಆಗಿದ್ದೇನೆ. ನೀವು ಮಾಡಿರುರ ಭಗವಾನ್ ಕನ್ಹಯ್ಯನ ಚಿತ್ರವನ್ನು ನೋಡಿ ನಾನು ನಿಜವಾಗಿ ಹುಚ್ಚಳಾಗಿದ್ದೇನೆ. ನಿಮ್ಮ ದೇಹದ ಮೇಲೆ ನನ್ನ ಪತಿತ ಜೀವನದ ಸೋಂಕನ್ನು ಹರಡಬಾರದಿತ್ತು. ಆದರೆ ವಿಧಿಯಿಲ್ಲ........ ಕೈಮೀರಿತು."

"ವಿಷಾದವೇತಕ್ಕೆ ರೂಪಾ. ನೀನಲ್ಲದಿದ್ದರೆ ನಿನ್ನ ಕೆಲಸವನ್ನು ಬೇರೆ ಯಾರಾದರೂ ಮಾಡುತ್ತಿದ್ದರು. ಇಂದಲ್ಲದಿದ್ದರೆ ನಾಳೆ. ಅದಕ್ಕೆ ಇಷ್ಟು ದುಃಖವೇ ?"

"ಹಾಗಲ್ಲಾ ಮಹಾಶಯ. 'ಶ್ಯಾಮಸುಂದರ' ಚಿತ್ರವನ್ನು ಬರೆಯುವ ಯೋಗ್ಯತೆ ಕೆಟ್ಟ ಬಾಳಿನಿಂದ ಕುಂದಬಾರದು ಎಂಬುದೇ ನನ್ನ ಆಶೆ. ನೀವು ದೊಡ್ಡವರಾಗಿ ಇಂತಹದೇ ಅನೇಕ ಉತ್ಕೃಷ್ಟ ಕೃತಿಗಳನ್ನು ಮಾಡಬೇಕು.—ದಾಸಿಯ ಮಾತನ್ನು ಕ್ಷಮಿಸಬೇಕು. ಒಂದು ಪ್ರಾರ್ಥನೆ ಇದೆ."

"ಹೇಳು ರೂಪ - ರಾಣಿ."

"ನನಗೆ....'ಶ್ಯಾಮಸುಂದರ'ನ ಭಿಕ್ಷವನ್ನು ನೀಡಬೇಕು. ಮತ್ತು ಕಲ್ಕತ್ತೆಗೆ ಬಂದಾಗ ಒಮ್ಮೆಯಾದರೂ ಇತ್ತ ಬಂದು ದರ್ಶನ ಕೊಡಬೇಕು."

ಮಾಣಿ ಕಣ್ಣುಗಳಲ್ಲಿಯೂ ನೀರೂರಿತು. 'ಶ್ಯಾಮಸುಂದರ' ನನ್ನೆತ್ತಿ ಅದರ ಹಿಂದೆ ರೂಪಳ ಹೆಸರು ಬರೆದು ಮನಃಪೂರ್ವಕವಾಗಿ ಚಿತ್ರವನ್ನಿತ್ತ. ರೂಪ ಅದನ್ನು ಎದೆಗೆ ಅಪ್ಪಿಕೊಂಡು ಮಾತಿನ ಮೇರೆ ಮೀರಿದ ಕೃತಜ್ಞತೆಯನ್ನು ಕಣ್ಣಿನಿಂದಲೇ ಸೂಚಿಸಿದಳು. ಮಾಣಿ ಆದರದಿಂದ ರೂಪಳನ್ನಪ್ಪಿ ಶುದ್ಧವಾದ ಪ್ರೇಮದಿಂದ ಅವಳನ್ನು ಚುಂಬಿಸಿದ.

ಅವನೀಶನ ವಾಣಿ ಕೇಳಿಸಲು ಅವಸರದಿಂದ ರೂಪಳನ್ನಗಲಿ ಚಿತ್ರಗಳನ್ನು ಸಂಗ್ರಹಿಸಿಕೊಂಡು ವೇಷಭೂಷಿತನಾಗಿ ಅವನೊಂದಿಗೆ ಹೊರಡಲು ಸಿದ್ಧನಾದ.

೧೩

'ಆನಂದ' ಪತ್ರಿಕೆಯ ಕಾರ್ಯಾಲಯದಲ್ಲಿ ಸಣ್ಣ ಸಭೆಯೊಂದು ಸೇರಿತು. ಸಂಪಾದಕ ಮುಕುಂದರಾಯರೇ ಅಧ್ಯಕ್ಷರು. ಮೂರ್ತಿ ರಮೇಶರೇ ವಾದಿ ಪ್ರತಿವಾದಿಗಳು. ಪ್ರತಿತಿಂಗಳೂ 'ಆನಂದ' ಪತ್ರಿಕೆಯಲ್ಲಿ ಪ್ರಕಟವಾಗುವ ಮುಖಚಿತ್ರಗಳನ್ನು ಆರಿಸುವ ಕಾರ್ಯಭಾರ ಮೂರ್ತಿ ರಮೇಶರನ್ನು ಸೇರಿದುದಾಗಿತ್ತು. ಆ ತಿಂಗಳು ಥಾಕೂರಸಿಂಗನ 'ಅಲಂಕಾರ' ಚಿತ್ರವನ್ನು ಮುಖಚಿತ್ರವಾಗಿ ಪ್ರಕಟಿಸಬೇಕೆಂದು ರಮೇಶನ ಹಟ. ಇತ್ತೀಚೆಗೆ 'ಆನಂದ'ದ ತುಂಬಾ ಮುಜಂದಾರ್, ಥಾಕೂರ ಸಿಂಗರೇ ಆಗಿದ್ದಾರೆ. ಸದ್ಯಕ್ಕೆ ಆ ಸಂಪ್ರದಾಯದ ಚಿತ್ರಗಳು ಸಾಕು. ಈಚೆಗೆ 'ಮಧುಕರ'ವೆಂಬ ಬಂಗಾಳೀ ಪತ್ರಿಕೆಯಲ್ಲಿ ಪ್ರಕಟವಾಗಿರುವ 'ಭ್ರಮರಗೀತ' ಎಂಬ ಚಿತ್ರವನ್ನು ಹಾಕಲೇಬೇಕೆಂದು ಮೂರ್ತಿಯ ಕೋರಿ. ಈ ಮಧ್ಯೆ ಯಾರನ್ನು ನೋಯಿಸುವುದು ಯಾರನ್ನು ಮೆಚ್ಚಿಸುವುದು ಎಂದು ರಾಯರು ಚಿಂತಾಕುಲರಾದರು.

ಮೂರ್ತಿಗೂ ರಮೇಶನಿಗೂ ಆಗಾಗ್ಗೆ ಯಾವದಾವದರೊಂದು ಕಾರಣಕ್ಕೆ ಜಗಳವಾಗುತ್ತಲೇ ಇತ್ತು. ಕಲೆಯ ವಿಚಾರ ಬಂದು ಬಿಟ್ಟರಂತೂ ಇಬ್ಬರೂ ವೈಮರೆತು ಬಿಡುತ್ತಿದ್ದರು. 'ಭ್ರಮರಗೀತ'ದಲ್ಲಿ ಅರ್ಥಸಾಮರಸ್ಯ ವಿಲ್ಲವೆಂದು ರಮೇಶನ ಆಕ್ಷೇಪ, 'ಅಲಂಕಾರ'ದಲ್ಲಿ ಅರ್ಥವೇ ಇಲ್ಲವೆಂದು ಮೂರ್ತಿಯ ಅಭಿಪ್ರಾಯ. ಮೃದುವಾಗಿ ಆರಂಭವಾದ ಮಾತು ಕ್ರಮ ಕ್ರಮೇಣ ಹದ್ದು ಮೀರುತ್ತ ಬಂತು.

"ನಿನಗೆ ಈ ಬಂಗಾಳಿ ಸಂಪ್ರದಾಯದ ಪ್ರೇಮ ದೊಡ್ಡ ರೋಗ ವಾಗುತ್ತಿದೆ ಮೂರ್ತಿ."

"ಹೌದು, ಅಭಿರುಚಿಯ ದಾರಿದ್ರ್ಯವೆಂಬ ರೋಗದಿಂದ ನರಳುವುದ ಕ್ಕಿಂತಲೂ ಉತ್ತಮ ಅಭಿರುಚಿಯಿಂದ ನರಳುವುದೇ ಲೇಸು ರಮೇಶ್."

"ಎಂತಹ ಅಭಿರುಚಿ. ಯಾರೋ ನಾಲ್ಕು ಜನ ಅದು ಉತ್ತಮ ಸಂಪ್ರದಾಯವೆಂದು ಹಾಡಿದರೆ ನೀನೂ ಹುಚ್ಚನಂತೆ ತಾಳಹಾಕು."

"ಸರಿ. ಆದರೆ ನಾಲ್ಕು ಜನ ನಿನ್ನ ಸಂಪ್ರದಾಯವನ್ನೇ ಉತ್ತಮವೆಂದೇತಕ್ಕೆ ಹಾಡುವುದಿಲ್ಲ."

"ಆ ನಾಲ್ಕು ಜನ ಹಾಡದಿದ್ದರೇನು. ಇಡೀ ಲೋಕವೇ ಹಾಡುತ್ತದೆ."

"ನಾಲ್ಕು ಜನದ ಹಾಡಿಗೆ ತಾಳ ಹಾಕುವ ಹುಚ್ಚ ನಾನು; ಇಡೀ ಲೋಕದ ಹಾಡಿಗೆ ತಾಳ ಹಾಕುವ ಹುಚ್ಚ ನೀನು—ಅಲ್ಲವೇ ರಮೇಶ್. ಕಲಾವಿದ ಕ್ರಿಯಾಶಾಲಿ ಯಾವಾಗ ಆಗುವುದಿಲ್ಲವೋ ಆಗ ನಾಚು ಬಾಲಿಕೆಯರ ಹಾದಿ ಹಿಡಿಯುತ್ತಾನೆ."

"ಇದು ತಲೆಹರಟೆ ಮಾತು ಮೂರ್ತಿ. ನಾಲ್ಕು ಪುಸ್ತಕಗಳನ್ನು ಓದಿದ್ದೇನೆಂಬ ಹೆಮ್ಮೆಯಿಂದ ನೀನು ಬಹಳ ದುರಹಂಕಾರದ ಮಾತುಗಳನ್ನಾಡುತ್ತಿರುವೆ. ಸರಿಯಾಗಿ ಒಂದು ಕುಂಚವನ್ನು ಹಿಡಿಯುವುದಕ್ಕೆ ಬರುವುದಿಲ್ಲ. ನೀನೊಬ್ಬ ಕಲಾವಿಮರ್ಶಕ - ದೊಡ್ಡ ಕಲಾವಿದ."

"ಒಪ್ಪಿದೆ ರಮೇಶ್. ಕುಂಚವನ್ನು ಹಿಡಿದು ನೀನು ಏನೇನು ಮಹತ್ಕಾರ್ಯಗಳನ್ನು ಮಾಡಿರುವೆ. ರ್ಯಾಫೇಲನ 'ಮ್ಯಾಡೋನ ಮತ್ತು ಮಗು' ಕದ್ದು 'ಯಶೋದಾಕೃಷ್ಣ' ರಚಿಸಿದೆ. ವೆಂಕಟಪ್ಪನವರ 'ಅರ್ಧನಾರೀಶ್ವರ' ಕದ್ದು 'ಹರಿಹರೇಶ್ವರ' ರಚಿಸಿದೆ. ರನೋದಚರಣ ಉಕೀಲರ 'ಮಹಾಕಾಳಿ'ಯನ್ನು ಕದ್ದು 'ದುರ್ಗಾಮಾತೆ' ರಚಿಸಿದೆ.—ಇನ್ನೂ ಹೇಳಲೋ ನಿನ್ನ ಕಲಾವೈಭವ. ಇವೆಲ್ಲಕ್ಕೂ ಕಳಸವಿಟ್ಟಂತೆ ಮಾಣಿಯ ಮೇಲಣ ಈರ್ಷೆಯಿಂದ ಅವನ 'ಸಂದೇಶ' ಚಿತ್ರಸುಟ್ಟದ್ದು. ನೀನು ಕಲಾವಿದ - ನಿನ್ನ ಅಂತರಂಗ ಕಲೆಯ ತೌರೂರು - ನೀನು ಕಲಾಚಾರ್ಯ."

"ಸಾಕು ನಿಲ್ಲಿಸು ಮೂರ್ತಿ. ನಾನು.... ನಾನು...."

"'ಭ್ರಮರಗೀತ'ದಲ್ಲಿ ಮಾಣಿಯಂತಹುದೇ ಕೈವಾಡವಿದೆ.—ಇದು ಅವನದೇ ಇರಬಹುದೇ ಎಂಬ ಸಂಶಯ ನಾನು ವ್ಯಕ್ತಗೊಳಿಸಿದ್ದಕ್ಕೆ ಅದರ ಮೇಲೂ ನಿನ್ನ ಆಗ್ರಹ."

"ನಿನ್ನದು ತಪ್ಪು ಆಪಾದನೆ ಮೂರ್ತಿ.... ತಪ್ಪು...."

"ಹೌದು. ಅವನಿರುವ ತನಕ ಕಾಡಿ ನಿನ್ನ ಸಂಪಾದನೆಗೆ ಅವನ ಕಲೆಯನ್ನು ಅಧೀನ ಮಾಡಲೆತ್ನಿಸಿದೆ. ಆದರದಕ್ಕೆ ಅವನು ಬಗ್ಗದಿರಲು ಈ ಬಗೆಯ ಹೀನವೈಷಮ್ಯ ತಾಳಿದೆ. ನಿನ್ನಂತೆ ಕಲಾವಿದನಾಗುವುದಕ್ಕಿಂತಲೂ ನನ್ನಂತೆ ಉತ್ತಮ ಕಲೆಯ ಯೋಗ್ಯತೆ ಗ್ರಹಿಸಿ ಮೆಚ್ಚಿ ಸಂತೋಷಿಸುವ ಶಕ್ತಿಯನ್ನು ಸಂಪಾದಿಸುವುದೆಷ್ಟೋ ಲೇಸು."

ಒಂದೊಂದು ಮಾತು ಒಂದೊಂದು ಚಾಟಿಯ ಪೆಟ್ಟಿನಂತೆ ರಮೇಶನ ಮೇಲೆ ಬೀಳಲಾರಂಭಿಸಿದವು. ಅವನ ತೇಜೋಭಂಗವನ್ನು ನೋಡಿ ರಾಯರಿಗೆ ತುಂಬ ವಿಷಾದವಾಯಿತು. ಇನ್ನು ಈ ವಾದ ಬೆಳೆಯಗೊಡಬಾರದೆಂದು ಮಧ್ಯೆ ಬಾಯಿಹಾಕಿ

"ನಿನಗೆ ಕೋಪ ಬಂದರೆ ಶುದ್ಧ ರಾಕ್ಷಸನಾಗಿ ಬಿಡುತ್ತೀ ಮೂರ್ತಿ. ಪೂರ್ವಾಪರವೆಲ್ಲಾ ಮರೆತು ಹೋಗುತ್ತದೆ. ನಾವು ಹೇಗೆ ಮಾಣಿ ವಿಚಾರದಲ್ಲಿ ಆದರವುಳ್ಳವರಾಗಿದ್ದೆವೋ ಹಾಗೆಯೇ ರಮೇಶ ಇದ್ದುದನ್ನು ಮರೆತೆಯೇನು? ಇವತ್ತು ಮಾಣಿ ಅಭ್ಯುದಯಕ್ಕೆ ನೀನು ನಾನು ಮಾಡಿರುವುದಕ್ಕಿಂತಲೂ ರಮೇಶ ಹೆಚ್ಚು ಉಪಕಾರ ಮಾಡಿದ್ದಾನೆ. ಅವನು ಮಾಣಿಗೆ ಕಲೆಯ ಓನಾಮದಿಂದ ಎಲ್ಲಾ ರಹಸ್ಯಗಳನ್ನು ಹೇಳಿಕೊಡದಿದ್ದರೆ ನಿನ್ನ ಮಾಣಿ ಇವತ್ತು ಹೋಟಲಿನ ಬೋರ್ಡುಗಳನ್ನು ಬರೆದುಕೊಡುವ 'ಕಲಾವಿದ'ನಾಗಿಬಿಡುತ್ತಿದ್ದ. ರಮೇಶನ ವಿಚಾರ ದುಡುಕಿ ಆಡಿದ ಮಾತಿಗೆ ನೀನು ವಿಷಾದಪಡಬೇಕು."

ಮುಕುಂದರಾಯರ ವಿಶಾಲಹೃದಯದ ನುಡಿ ಮೂರ್ತಿಗೆ ತನ್ನ ಸಣ್ಣತನವನ್ನು ತೋರಿಕೊಟ್ಟಿತು. ಆತ್ಮೀಯತೆಯಿಂದ 'ಸಂದೇಶ' ಚಿತ್ರದ ಬಗ್ಗೆ ಆದ ಪ್ರಕರಣವನ್ನು ರಮೇಶ ತನಗೆ ತಿಳಿಸಿದುದಕ್ಕೆ ಪ್ರತಿಯಾಗಿ ತಾನು ಅದರ ದುರುಪಯೋಗ ಮಾಡಿಕೊಂಡುದಕ್ಕೆ ತುಂಬಾ ವ್ಯಥಿತನಾದ. ಮರುಕ್ಷಣವೇ ರಮೇಶನ ಬಳಿ ಬಂದು ಆದರದಿಂದ ಅವನ ಭುಜದ ಮೇಲೆ ಕೈ ಹಾಕಿ

"ಕ್ಷಮಿಸು ಮಿತ್ರಾ, ಅವಿವೇಕದಿಂದ ನಾನು ಆಡಿದ ಕೆಟ್ಟಮಾತುಗಳನ್ನು. ಎಲ್ಲರೂ ತಪ್ಪಿ ನಡೆಯುತ್ತೇವೆ. ಕ್ಷಮಿಸುವುದು ದೊಡ್ಡ ಗುಣ. ಅದನ್ನು ನಾನಂತೂ ತೋರಿಸಲಿಲ್ಲ – ನೀನಾದರೂ ತೋರಿಸು" ಎಂದು ಕಳಕಳಿಯಿಂದ

ನುಡಿದ. ಅವನ ಕಣ್ಣಂಚಿನಲ್ಲಿ ನಿಂತಿದ್ದ ಹನಿಗೆ ಉತ್ತರವಾಗಿ ರಮೇಶನ ಕಣ್ಣಂಚಿನಲ್ಲಿಯೂ ಹನಿ ನಿಂತಿತು. ಪಶ್ಚಾತ್ತಾಪದ ಪವಿತ್ರ ಜಲದಲ್ಲಿ ಶುದ್ಧಿಗೊಂಡ ಗೆಳೆಯರ ಎರಡು ಮನಸ್ಸುಗಳು ಒಂದುಗೂಡಿದವು. ರಮೇಶರಾಯರನ್ನು ಕುರಿತು

"ಭ್ರಮರಗೀತವನ್ನೇ ಹಾಕಿಬಿಡಿ ಮಾವಯ್ಯ. ಆ ಚಿತ್ರಶಿಲ್ಪಿಯ ವಿಚಾರ ಬರೆದು ತಿಳಿಸುವಂತೆ 'ಮಧುಕರ' ಕಾರ್ಯಾಲಯಕ್ಕೆ ಬರೆಯಿರಿ. ನೋಡುವ, 'ಮಣೀಂದ್ರ' ಮಾಣಿಯೇ, ಆಗುತ್ತಾನೇನೋ"

ಆ ಮಾರ್ಮಿಕ ನುಡಿಯ ಹಿಂದಿದ್ದ ಅನುತಾಪ, ಅನುರಾಗ, ಆಶೆಗಳನ್ನು ಗ್ರಹಿಸಿ ರಾಯರೂ ಮೂರ್ತಿಯೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

## ೧೪

ಕಲ್ಕತ್ತೆಯಿಂದ ಹಿಂದಿರುಗಿದ ಮೇಲೆ ಮಾಣಿಯ ರೀತಿಯೇ ಬದಲಾಯಿತು. ತನ್ನ ಚಿತ್ರಗಳು 'ಮಧುಕರ' ಸಂಪಾದಕರಿಂದ ಕೊಳ್ಳಲ್ಪಟ್ಟ ವಿಚಾರವನ್ನು ಮಾತ್ರ ನೀಲರಂಜನನಲ್ಲಿ ಹೇಳಿದ್ದನಲ್ಲದೆ ಇತರ ಅನುಭವಗಳ ಬಗ್ಗೆ ಉಸಿರೆತ್ತಿರಲಿಲ್ಲ. ಅಭ್ಯಾಸಕ್ಕೆ ಕುಳಿತರೆ ಹಗಲು ರಾತ್ರಿಗಳೆನ್ನದೆ ಒಂದೇ ಸಮನೆ ಕುಂಚವಿಡಿದು ಉದ್ದಿಷ್ಟ ಕೃತಿಯನ್ನು ಮುಗಿಸುವ. ಮನಸ್ಸು ಬಾರದಿದ್ದರೆ ದಿವಸಗಳಾದರೂ ಬಣ್ಣ ಬಟ್ಟಿಗಳ ಕಡೆಗೇ ಕಣ್ಣು ಹಾಕ. ಸಂಗೀತಾಭ್ಯಾಸಕ್ಕೆ ಕುಳಿತರೂ ಅದೇ ರೀತಿ. ಹೀಗಾಗಿ ಮೊದಲಿನ ಅಂಕೆ ತಪ್ಪುತ್ತಾ ಬಂತು. ಆಗಾಗ್ಗೆ ನಂದಲಾಲ ಗುರುಗಳೂ ಇದನ್ನು ಸೂಕ್ಷ್ಮವಾಗಿ ಸೂಚಿಸುತ್ತ ಬಂದರು. ಮನಸ್ಸಿನ ಸ್ಥಿತಿಯ ಆಕಾರಗಳೆಂಬಂತೆ ಕೃತಿಗಳ ಮೇಲೂ ಒಂದು ಬಗೆಯ ಅಸ್ಥಿರತೆ ಮೂಡುತ್ತ ಬಂತು.

ಈ ಬಗೆಯ ಜಂಜಡದ ಕಾರಣ ನೀಲರಂಜನನಿಗೆ ಗೊತ್ತಾಗಲಿಲ್ಲ. ಮಾಣಿಯಿಂದಲೇ ತಿಳಿದುಕೊಳ್ಳಬೇಕೆಂಬ ಅವನ ಪ್ರಯತ್ನ ವಿಫಲವಾಯಿತು. ಅವನೀಶ ಸದುತ್ತರ ಕೊಡದೆ ಹೋದ. ಮಾಣಿಯ ಮನಸ್ಸಿಗೆ ಶಾಂತಿಯನ್ನೀಯಬೇಕೆಂದು ಮಾಡಿದ ತನ್ನ ಪ್ರಯತ್ನಗಳೆಲ್ಲಾ ನಿಸ್ಸಾರ್ಥಕವಾದುದಕ್ಕೆ ತುಂಬ ದುಃಖಿತನಾದ.

ಒಂದು ದಿನ ಭೋಜನ ತೀರಿಸಿಕೊಂಡು ಮೋಹನ ತನ್ನ ಕೋಣೆಗೆ ಬರುವ ವೇಳೆಗೆ ಅಂಚೆಯವನು ಕೈಯ್ಯಲ್ಲೊಂದು ಪ್ಯಾಕೆಟ್ಟನ್ನು ಹಿಡಿದು ನಿಂತಿದ್ದ. ತನಗೇ ಬಂದಿದ್ದ ಆ ಪ್ಯಾಕೆಟ್ಟನ್ನು ನೋಡಿ ಮೋಹನಗೆ ಅತ್ಯಾಶ್ಚರ್ಯವಾಯಿತು. ಅಂಚೆಯವನ ರಶೀದಿಗೆ ರುಜುಹಾಕಿ ಕುತೂಹಲದಿಂದ ಒಳಗೆ ಬಂದು ಒಡೆದು ನೋಡಿದ. ಪ್ಯಾಕೆಟ್ಟಿನಿಂದ ತೂಕವಾದ ಚಿನ್ನದ ಸರಪಳಿಯೊಂದು ಜಾರಿ ಕೆಳಗೆ ಬಿದ್ದಿತು. ಕೈಗೆ ತೆಗೆದುಕೊಂಡು ನೋಡಿದ. ಕುತ್ತಿಗೆಗೆ ಹಾಕಿಕೊಳ್ಳುವ ಒಂದೆಳೆಯ ಚಿನ್ನದ ದಾರ, ಎದೆಯಮೇಲೆ ಬರುವಂತೆ ಒಂದು ಕೆಂಪಿನಿಂದ ಕೂಡಿದ 'ಹೃದಯ' ಮಾದರಿಯ ತಾಳಿ. ಅದನ್ನು ಕೈಯಲ್ಲಿ ಹಿಡಿದು ಪ್ಯಾಕೆಟ್ಟನ್ನು ಬಿಚ್ಚಿದ, ಕಣ್ಣಿಗೆ ಬಿದ್ದ ನೋಟ ಎದೆಯನ್ನು ಝಲ್ಲೆನಿಸಿತು. ತನ್ನ 'ಶಾಮಸುಂದರ' ಚಿತ್ರ, ಅದರ ಜತೆಯಲ್ಲಿ ತಾನು ಚಿತ್ರಿಸಿದ್ದ 'ರೂಪಳ ಭಾವ ಚಿತ್ರ.'—ಇವುಗಳೇಕೆ ಬಂದವು ಎಂದು ಯೋಚಿಸುತ್ತಿರುವಲ್ಲಿ ಒಂದು ಕಾಗದ ಕಣ್ಣಿಗೆ ಬಿತ್ತು.

"ಮಹಾಶಯಾ,

ಎರಡು ದಿವಸಗಳ ಹಿಂದೆ ಸಂಧ್ಯಾಸಮಯದಲ್ಲಿ ನನ್ನ ಸೋದರಿ ರೂಪಾ ಪರಲೋಕವಾಸಿಯಾದಳೆಂದು ತಿಳಿಸಲು ತುಂಬಾ ವಿಷಾದಿಸುತ್ತೇನೆ. ಐದು ದಿವಸಗಳ ವಿಷಮಶೀತಜ್ವರವೆಂದು ವೈದ್ಯರು ಅಭಿಪ್ರಾಯಪಟ್ಟಿದ್ದಾರೆ. ಸಾಯುವ ಕೆಲವು ಗಂಟೆಗಳ ತನಕ ಪ್ರಜ್ಞಾಹೀನಳಂತೆಯೇ ಇದ್ದಳು. ಅನಂತರ ತಮ್ಮ ಹೆಸರನ್ನು ಹಿಡಿದು ಕೂಗುವುದಕ್ಕೆ ಆರಂಭಿಸಿ ತಮ್ಮನ್ನು ಕಾಣದೆ ತತ್ತರಿಸಿದಳು. ಕೊನೆಗೆ ಈ ಎರಡು ಚಿತ್ರಗಳು, ತನ್ನ ಕೊರಳಲ್ಲಿದ್ದ ಹಾರವನ್ನು ತನ್ನ ನಮಸ್ಕಾರಪೂರ್ವಕವಾಗಿ ತಮಗೆ ಕಳುಹಿಸಬೇಕೆಂದು ತಿಳಿಸುತ್ತಾ ಕಂಬನಿದುಂಬಿ, ಕಲೆಯಲ್ಲಿ ದೊಡ್ಡವರಾಗಿ ಮಡದಿ ಮಕ್ಕಳೊಂದಿಗೆ ಸುಖವಾಗಿರುವಾಗ ಒಮ್ಮೆಯಾದರೂ ತನ್ನನ್ನು ಜ್ಞಾಪಿಸಿಕೊಂಡರೆ ಧನ್ಯಳಾಗುತ್ತೇನೆಂದು ತಿಳಿಸಹೇಳಿದಳು.

ಈ ಸುದ್ದಿಯನ್ನೇ ಅವನೀಶ ಬಾಬುಗಳಿಗೂ ತಿಳಿಸುವುದು.

ಇಂತು ದಾಸಿ – **ಪ್ರೇಮ**"

ಕಾಗದವನ್ನು ಓದುತ್ತಾ ಓದುತ್ತಾ ಸ್ತಂಭಿತನಾಗಿ ಮಾಣಿ ಕುಳಿತು ಬಿಟ್ಟ. ನೀಲರಂಜನ ಅವನನ್ನು ಮೆಲ್ಲನೆ ಕರೆದೊಯ್ದು ಹಾಸಿಗೆಯ ಮೇಲೆ ಮಲಗಿಸಿ ತಲೆಗೆ ನೀರುತಟ್ಟಿ ಉಪಚರಿಸಿ ಕಾಗದ ಓದಿಕೊಂಡ. ರೂಪಾ ಯಾರು? ಪ್ರೇಮ ಯಾರು? ಅವನಿಗೆ ಒಂದೂ ಬಗೆಹರಿಯದೆ ದೊಡ್ಡ ಸಮಸ್ಯೆಯಾಯಿತು.

ಸ್ವಲ್ಪ ಕಾಲ ಕಳೆಯಲು ಮಾಣಿ ಗಟ್ಟಿಯಾಗಿ ರೋದಿಸತೊಡಗಿದ. ಅಸ್ಪಷ್ಟವಾದ ಮಾತುಗಳಿಂದ ನೀಲರಂಜನನಿಗೆ ರೂಪಳ ಪವಿತ್ರ ಪ್ರೇಮ ವನ್ನು ನಿರೂಪಿಸಿದ. ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಅವನೀಶನೂ ಕಾಗದವನ್ನು ಓದಿಕೊಂಡು ದುಃಖಿತನಾದ. ಮಾಣಿಯ ಹೃದಯದಲ್ಲಿ ಏನೋ ಒಂದು ಕಂಪನ, ಏನೋ ಒಂದು ಬಗೆಯ ಪ್ರಚಂಡ ವೇದನೆ. ರೂಪಳ ಒಂದೊಂದು ಮಾತೂ ಜ್ಞಾಪಕಕ್ಕೆ ಬಂದು ಅವನ ದುಃಖವನ್ನು ನೂರ್ಮಡಿಸುತ್ತಿತ್ತು.

"ಮಹಾಶಯ, 'ಶ್ಯಾಮಸುಂದರ' ಚಿತ್ರವನ್ನು ಬರೆಯುವ ಯೋಗ್ಯತೆ ಕೆಟ್ಟಬಾಳಿನಿಂದ ಕುಂದಬಾರದು............ನೀವು ದೊಡ್ಡವರಾಗಿ ಇಂತಹದೇ ಅನೇಕ ಉತ್ಕೃಷ್ಟ ಕೃತಿಗಳನ್ನು ಮಾಡಬೇಕು." ಎಂಬ ಮಾತುಗಳು ಮತ್ತೆ ಮತ್ತೆ ಜ್ಞಾಪಕಕ್ಕೆ ಬರುತ್ತಿದ್ದವು.

"ಅಯ್ಯೋ, ಎಂತಹ ನಿರ್ಭಾಗ್ಯ. ಅಂತಹ ಜೀವ ನನ್ನ ಭಾಗಕ್ಕೆ ಇಲ್ಲದೆ ಹೋಯಿತಲ್ಲಾ" ಎಂದು ಚೀರಿದ.

ನೀಲರಂಜನ ಕಂಬನಿದುಂಬಿ ಸಂತೈಸತೊಡಗಿದ. ದುಃಖದ ಕರಾಳ ಮೂರ್ತಿಯ ಮುಂದೆ ಒಬ್ಬೊಂಟಿಗನಾಗಿ ನಿಂತಿದ್ದ ಮಾಣಿಯ ನೆರವಿಗೆ ನಿಂತು ಅದನ್ನು ಎದುರಿಸಲು ಸಹಾಯ ಮಾಡುತ್ತಿದ್ದ. ನೀಲರಂಜನನೂ ದುಃಖವನ್ನು ಕಂಡಿದ್ದ. ತನ್ನ ಮುದ್ದಿನ ತಂಗಿಯನ್ನು ಸಾವು ಅಪಹರಿಸಿ ಕೊಂಡು ಹೋದದ್ದನ್ನು ನೋಡಿದ್ದ. ಮಾತಿಗೆ ಎಟಕದ ದುಃಖವನ್ನು ಮೂಕ ಸಹಾನುಭೂತಿಯಿಂದ ಉಪಶಮನಗೊಳಿಸುತ್ತಿದ್ದ.

ರೂಪಳ ಮೇಲೆ ಅವನೀಶನ ಪ್ರೇಮವಿರಲಿಲ್ಲವಾಗಿ ಅವನಿಗೆ ಅವಳ ಸಾವು ದುಸ್ಸಹನೀಯವಾಗಿ ಕಂಡುಬರಲಿಲ್ಲ. ಒಬ್ಬ ಬೆಲೆವೆಣ್ಣಿಗೆ ಇಂತು ಹಲುಬುವ ಮಾಣಿಯ ಮೌಢ್ಯವನ್ನು ಕಂಡು ಅವನಿಗೆ ಅನುತಾಪದ ಬದಲು

ನಗೆ ಬಂದಿತು. ಆದರೆ ಆ ಭಾವನೆಯನ್ನು ನೀಲರಂಜನನೆದುರಿಗೆ ತೋರಲು ಬಯಸದೆ ಮಾಣಿಗೆ ನಾಲ್ಕು ಸಮಾಧಾನದ ಮಾತುಗಳನ್ನಾಡಿ ತನ್ನ ಕೋಣೆಗೆ ತೆರಳಿದ.

ಮಾಣಿಯ ದೃಷ್ಟಿ ರೂಪಳ ಚಿತ್ರದ ಮೇಲೆ ಬಿತ್ತು. ಅದನ್ನೆತ್ತಿ ಆದರದಿಂದ ಎದೆಗಪ್ಪಿಕೊಂಡು 'ರೂಪಾ – ರೂಪಾ' ಎಂದು ಚೀರುತ್ತಾ ನಿಶ್ಚೇತನನಾದ.

೧೫

ವರ್ಷಾಂತ್ಯದ 'ಕಲಾ ಪ್ರದರ್ಶನ'ಕ್ಕೆ ಎಲ್ಲ ಏರ್ಪಾಟುಗಳೂ ನಡೆಯುತ್ತಿದ್ದವು. ಸ್ವಯಂ ನಂದಲಾಲರೇ ನಿಂತುಕೊಂಡು ವ್ಯವಸ್ಥೆ ನೋಡಿಕೊಳ್ಳುತ್ತಿದ್ದರು. ವಂಗೀಯ ಚಿತ್ರಕಲಾ ಸಂಪ್ರದಾಯದಲ್ಲಿ ಖ್ಯಾತರಾಗಿದ್ದ ಕಲಾವಿದರಿಗೆ ಪ್ರತ್ಯೇಕ ವಿಭಾಗವೊಂದು ಏರ್ಪಾಟಾಗಿತ್ತು. ಶಾಂತಿನಿಕೇತನದ ಕಲಾಭ್ಯಾಸಿಗಳ ಚಿತ್ರಗಳಲ್ಲಿ ಉತ್ತಮವಾದವು ಮತ್ತೊಂದೆಡೆಯಲ್ಲಿ ಅಂದವಾಗಿ ಅಲಂಕೃತವಾಗಿದ್ದವು. ಕಲಾಭ್ಯಾಸಿಗಳ ವಿಭಾಗದ ವ್ಯವಸ್ಥೆ ನೀಲರಂಜನನ ಪಾಲಿಗೆ ಬಂದಿತ್ತು.

ತಂಡೋಪತಂಡವಾಗಿ ಕಲ್ಕತ್ತೆ, ಡಾಕಾ, ಕಾಶಿ ಮೊದಲಾದ ನಗರಗಳಿಂದ ಕಲಾಪ್ರೇಮಿಗಳೂ, ಕಲಾವಿಮರ್ಶಕರೂ, ಪತ್ರಿಕಾಕರ್ತರೂ ಪ್ರದರ್ಶನಕ್ಕೆ ಬರಲಾರಂಭಿಸಿದರು. ನಿಸರ್ಗಕ್ಕೆ ಕಲೆಯೂ, ಕಲೆಗೆ ನಿಸರ್ಗವೂ ಪರಸ್ಪರ ಶೋಭೆಯನ್ನೀಯುತ್ತಾ ಶಾಂತಿನಿಕೇತನವನ್ನು ರಮಣೀಯ ಕ್ಷೇತ್ರವನ್ನಾಗಿಸಿಬಿಟ್ಟಿತ್ತು.

ನೋಟಕರು ತಮಗೆ ಬೇಕಾದ ಚಿತ್ರಗಳನ್ನು ಮೆಚ್ಚುತ್ತಾ, ಕೊಳ್ಳುತ್ತಾ ಪ್ರದರ್ಶನದ ಪೂರ್ಣಲಾಭವನ್ನು ಪಡೆಯುತ್ತಿದ್ದರು. ಒಬ್ಬೊಬ್ಬರ ಲಕ್ಷ್ಯ ಒಂದೊಂದರ ಮೇಲೆ ಬೀಳುತ್ತಿತ್ತು. ಆದರೆ **'ಪತಿತ ಪರಿವರ್ತನ'** ಚಿತ್ರ ಎಲ್ಲರ ಗಮನ ಸೆಳೆಯಲಾರಂಭಿಸಿತು. "ಒಂದು ಹರುಕು ಮುರುಕು ದೇವಾಲಯದ ಒಳಭಾಗ. ಗರ್ಭಗುಡಿಯ ಹಿಂದಿನ ಗೋಡೆಯನ್ನು ಅಶ್ವತ್ಥವೃಕ್ಷವೊಂದು ಸೀಳಿಕೊಂಡು ಬೆಳೆದು ದೇವಸ್ಥಾನವನ್ನೆಲ್ಲಾ ಆಕ್ರಮಿಸಿಬಿಟ್ಟಿದೆ. ಸೌಮ್ಯಸುಂದರಿಯಾದ ವಿದ್ಯಾಭಿಮಾನಿದೇವಿ ಪದ್ಮಪೀಠಸ್ಥೆ

ಯಾಗಿ ಅಭಯ, ವರದ ಹಸ್ತ ಮುದ್ರೆಗಳನ್ನು ಧರಿಸಿದ್ದಾಳೆ. ಮುಖದಲ್ಲಿ ಜಗನ್ಮಾತೆಗೆ ಒಪ್ಪುವ ಲಾಲಿತ್ಯ, ಅನಂತಪ್ರೇಮ, ಅಪಾರ ಕರುಣೆ. ದೇವಿಯ ಎದುರಿಗೆ ಭಕ್ತನೊಬ್ಬ ತಲೆ ತಗ್ಗಿಸಿ ಉದ್ದಂಡ ನಮಸ್ಕಾರದ ಕಾಣಿಕೆಯನ್ನರ್ಪಿಸಿದ್ದಾನೆ." ಚಿತ್ರದಲ್ಲಿನ ಸಾರಳ್ಯ, ಗಭೀರತೆ, ಹೃದಯ ವನ್ನು ಮುತ್ತುವ ಪಶ್ಚಾತ್ತಾಪ ಪ್ರೇಕ್ಷಕರನ್ನು ಆಶ್ಚರ್ಯಚಕಿತರನ್ನಾಗಿ ಸಿತು. ಇದನ್ನು ರಚಿಸಿದ ಶಿಲ್ಪಿ ಯಾರೆಂದು ಎಲ್ಲರೂ ಕೇಳುವವರೇ! ಚಿತ್ರಗಳನ್ನು ವಿವರಿಸುತ್ತಾ ಅಲ್ಲಿಯೇ ನಿಂತಿದ್ದ ನೀಲರಂಜನ ಹೆಮ್ಮೆಯಿಂದ ತನ್ನ ಗೆಳೆಯನ ಕಲಾ ಕೌಶಲ್ಯವನ್ನು ವರ್ಣಿಸತೊಡಗಿದ.

ತನ್ನ ಚಿತ್ರಗಳಿಗೆ, ಅದರಲ್ಲಿಯೂ 'ಪತಿತಪರಿವರ್ತನ'–'ಶ್ಯಾಮ ಸುಂದರ'–'ಸಂದೇಶ'ಗಳಿಗೆ ದೊರೆತ ಮನ್ನಣೆ ಮಾಣಿಯನ್ನು ಒಮ್ಮೆಲೇ ಸ್ವರ್ಗಕ್ಕೊಯ್ದಿತು. ದೊಡ್ಡ ದೊಡ್ಡ ವಿಮರ್ಶಕರು ದೊಡ್ಡ ದೊಡ್ಡ ಮಾತುಗಳಲ್ಲಿ ತನ್ನ ಚಿತ್ರಗಳ ಬಗ್ಗೆ ಬರೆಯುತಿದ್ದ ಲೇಖನಗಳನ್ನು ಸಂಗ್ರ ಹಿಸತೊಡಗಿದ. ಅವುಗಳ ಬಾಯಿಪಾಠ ಮಾಡಿಕೊಂಡು ಗೆಳೆಯರಿಗೂ, ಸಹಪಾಠಿಗಳಿಗೂ ಹೇಳತೊಡಗಿದ. ಅನೇಕ ಪತ್ರಿಕಾ ಸಂಪಾದಕರಿಂದ ಚಿತ್ರಗಳಿಗೆ ಆಹ್ವಾನಗಳು ಬರತೊಡಗಿದವು. ಅವುಗಳಲ್ಲಿ 'ಮಧುಕರ' ಪತ್ರಿಕೆಯ ಸಂಪಾದಕರು ಬರೆದ ಒಂದು ಕಾಗದ ಮಾಣಿಯ ಮನಸ್ಸಿಗೆ ವರ್ಣನಾತೀತವಾದ ಆನಂದವನ್ನು ತಂದಿತು. ಚಿತ್ರಗಳು ಎಷ್ಟು ದೊರೆ ತರೂ ಬೇಕೆಂದು 'ಆನಂದ' ಪತ್ರಿಕೆಯ ಸಂಪಾದಕರು ಬರೆದಿದ್ದ ಕಾಗದ ವನ್ನು ಒಡೆದು ನೋಡಿದ." 'ಆನಂದ' ಪತ್ರಿಕೆಯ ಸಂಪಾದಕರಿಗೆ ತನ್ನ ಗುರುತು ಸಿಕ್ಕಿರಬಹುದೇ – ಇರಲಾರದು–ಸಿಕ್ಕಿದ್ದರೆ ಅಪರಿಚಿತರಿಗೆ ಬರೆಯು ವಂತೆ ಹೀಗೆಂದಿಗೂ ಬರೆಯಲಾರರು" ಎಂದು ಸಮಾಧಾನಗೊಂಡ. 'ನನ್ನ ನಾಡು ನನ್ನ ಕಲೆಯನ್ನು ಮೆಚ್ಚುತ್ತಿದೆ' ಎಂಬ ಭಾವನೆ ಮನಸ್ಸಿಗೆ ಹೊಳೆದೊಡನೆಯೇ ಮಿಕ್ಕ ಎಲ್ಲರ ಮೆಚ್ಚುಗೆಯೂ ತೃಣಪ್ರಾಯವಾಗಿ ಕಂಡು ಬಂತು. 'ಮೂರ್ತಿಯವರು ಏನು ಅಭಿಪ್ರಾಯಪಡುವರೋ—ರಮೇಶ ರಾಯರು ಏನನ್ನುವರೋ?' ಎಂದು ಅಲೋಚಿಸುವ. ಮರುಕ್ಷಣವೇ ಅವರೆಲ್ಲರೂ ಒಪ್ಪದಿದ್ದರೆ ಮುಕುಂದರಾಯರು ಹೀಗೆ ಬರೆಯುತ್ತಿದ್ದರೇ ಎಂದು ಸಮಾಧಾದ ತಾಳುವನು.

ಬೇಸಿಗೆಯ ರಜೆ ಆರಂಭವಾಯಿತು. ವಿದ್ಯಾರ್ಥಿಗಳು ತಮ್ಮ ತಮ್ಮ ಮನೆಗಳಿಗೆ ಹೊರಡಲು ಅಣಿಯಾದರು. ಅವರಲ್ಲಿ ನೀಲರಂಜನನೂ ಒಬ್ಬ. ಗೆಳೆಯ ಮಾಣಿಯನ್ನು ಬಿಟ್ಟು ಹೋಗಲು ಅವನ ಅರ್ಧ ಜೀವವೇ ಉಡುಗಿ ಹೋಗಿತ್ತು; ಆದರೆ ಮಾಣಿ ಅವನೊಂದಿಗೆ ಊರಿಗೆ ಹೋಗಲು ಒಪ್ಪಲಿಲ್ಲ. ಬೇಸಿಗೆಯ ರಜೆಯಲ್ಲಿ ಚೆನ್ನಾಗಿ ಸಂಗೀತಾಭ್ಯಾಸವನ್ನು ಮಾಡಬೇಕೆಂದೂ ಎಲ್ಲಿಗೂ ಹೋಗಬಾರದೆಂದೂ ಮಾಣಿ ನಿರ್ಧರಿಸಿ ಬಿಟ್ಟಿದ್ದ. ಇವರ ಜತೆಗೆ ಅವನೀಶನೂ ಎಲ್ಲಿಗೂ ಹೋಗುವುದಿಲ್ಲವೆಂದು ಹೇಳಿ ಬಿಟ್ಟಿದ್ದ.

ನೀಲನನ್ನು ಕಳುಹಿಸಿ ಬರಲು ಜೋಲಪುರದ ನಿಲ್ದಾಣಕ್ಕೆ ಮಾಣಿ ಅವನ ಜೊತೆ ಬಂದ. ಗಾಡಿ ಬರಲು ಹತ್ತು ನಿಮಿಷಗಳಿದ್ದವು. ನೀಲನ ನಿರ್ವಿಣ್ಣತೆ ಕಂಡು ಅವನನ್ನು ಹುರುಪುಗೊಳಿಸಲಾರಂಭಿಸಿದ.

"ಎರಡು ತಿಂಗಳೊಳಗೇ ಬರುವೆಯಲ್ಲವೆ ನೀಲಾ ?"

"ಅದಕ್ಕೆ ಮುಂಚೆ ಬಂದರೂ ಬಂದೆ. ಆದರೆ ಅಲ್ಲಿನವರೆಗೆ ನಿನ್ನನ್ನು ಬಿಟ್ಟು ಹೇಗಿರಲಿ ?"

"ಊರಿನ ವಾತಾವರಣದಲ್ಲಿ ವಿಯೋಗವ್ಯಥೆ ಕಡಿಮೆಯಾಗುವುದು ನೀಲಾ. ಯೋಚಿಸಬೇಡ. ಎಂತೆಂತಹುದೋ ಮರೆತು ಹೋಗುವುದು ಇನ್ನು...."

ರೈಲು ಬಂದು ನಿಂತಿತು. ಜೋಲಪುರದ ನಿಲ್ದಾಣದಲ್ಲಿ ಒಂದೆರಡು ನಿಮಿಷಗಳಿಗಿಂತ ಹೆಚ್ಚಾಗಿ ನಿಲ್ಲುವುದಿಲ್ಲವಾದ್ದರಿಂದ ನೀಲ ಗಡುಬಿಡಿ ಯಿಂದ ರೈಲು ಹತ್ತಿ ಕುಳಿತ. ಮಾಣಿಯ ಕೈ ಹಿಡಿದು ಉಕ್ಕಿಬರುತ್ತಿದ್ದ ದುಃಖವನ್ನು ತೋರಗೊಡದೆ

"ನೀನು ಕಾಣೆ ಮಾಣಿ. ಎಂತಹುದನ್ನು ಬೇಕಾದರೂ ಮರೆಯ ಬಹುದು. ಆದರೆ ಗೆಳೆತನದ ಪವಿತ್ರಪ್ರೇಮವನ್ನು ಎಂದೆಂದಿಗೂ ಮರೆಯ ಲಾಗುವುದಿಲ್ಲ........ನನಗೆ" ಎಂದು ಹೇಳುತ್ತಿರುವಂತೆ ರೈಲು ಹೊರಟು ಬಿಟ್ಟಿತು. ದೃಷ್ಟಿಯಾಚೆ ರೈಲು ಹೋಗುವ ತನಕ ಗೆಳೆಯರ ನೋಟಗಳು ಪರಸ್ಪರ ನೆಟ್ಟು ಹೋಗಿದ್ದವು. ರೈಲು ಕಾಣದಾಗಲು ಮಾಣಿ ದೀರ್ಘವಾಗಿ ನಿಟ್ಟುಸಿರ್ಗರೆದು ಹಿಂದಿರುಗಿದ. ತನ್ನ ಸಣ್ಣತನವನ್ನು ನೆನೆದು ತಲೆ

ತಗ್ಗಿಸಿದ. ನೀಲನ ಅಂತರಂಗವನ್ನು ಅರಿತುಕೊಳ್ಳದೆ ಅವನ ಮನಸ್ಸು ನೋಯುವಂತಹ ಮಾತನಾಡಿದುದಕ್ಕೆ ತುಂಬ ನೊಂದುಕೊಂಡ. ಅಲ್ಪನಾದ ತನ್ನ ಮೇಲೆ ನೀಲ ಸಂಕೋಚವಿಲ್ಲದೆ ಸುರಿದ ಸ್ನೇಹದ ಹೊನ್ನು ಮಳೆಯನ್ನು ನೆನೆದು ತನ್ನ ಲೋಭಿತನವನ್ನು ಜರಿದುಕೊಂಡ.

ಅವನೀಶನನ್ನು ಕಂಡೊಡನೆಯೇ ಮನಸ್ಸಿನ ಕ್ಲೇಶಗಳೆಲ್ಲಾ ದೂರ ವಾದವು. ಅವನ ಚತುರೋಕ್ತಿಗಳನ್ನು ಕೇಳುತ್ತ ಕೇಳುತ್ತ ತನ್ನ 'ಎಳಸು ತನ'ವನ್ನು ನೋಡಿ ತಿರಸ್ಕಾರದಿಂದ ನಕ್ಕ. ಆ ನಗುವನ್ನು ತಡೆಯಲು ಮನಸ್ಸಿನ ಗುಪ್ತಗುಹೆಯಿಂದೇಳುತ್ತಿದ್ದ ನೋವಿನ ಕಲಮಲವನ್ನು ನಿವಾರಿಸಲು ಅವನೀಶನನ್ನು ಹಾಡ ಹೇಳಿ ಅದರಲ್ಲಿ ಮೈಮರೆತ. ಯಮುನ್ ರಾಗದ ಗಝಲು. ಜಯದೇವ ಕವಿಯ ಗೀತಗೋವಿಂದದ ಒಂದು ನುಡಿ. ವಿರಹಸಂತಪ್ತನಾದ ಕೃಷ್ಣ ರಾಧೆಯನ್ನು ಕಂಡು ಕಾತರನಾಗಿ, ಮೋಹಾಂಧನಾಗಿ 'ನಿನ್ನ ಪಾದಗಳನ್ನು ನನ್ನ ತಲೆಯ ಮೇಲಿಡು' ಎಂದು ಬೇಡಿಕೊಳ್ಳುತ್ತಾನೆ. ಅವನೀಶನ ಉಜ್ವಲ ಕಂಠದಲ್ಲಿ ಅದನ್ನು ಕೇಳುತ್ತಾ ಕೇಳುತ್ತಾ ಮಾಣಿಯ ಮನಸ್ಸು ಕಳವಳಗೊಂಡಿತು. ತನ್ನ ಅನುಭವದ ಕಡೆಗೆ ಭಾವ ಹರಿಯಿತು. ಮಾನವಜೀವನದ ಮೇಲೆ ಕಾಮ ಮೋಹಗಳ ಆಧಿಪತ್ಯವನ್ನು ಕುರಿತ ವಿಚಾರಸರಣಿ ಉದಿಸಲಾರಂಭಿಸಿತು. ಏನನ್ನೋ ಯೋಚಿಸುತ್ತಾ

"ಅವನೀ, ನಾಳೆ ಕಲ್ಕತ್ತೆಗೆ ಹೋಗೋಣವೇ ?"

"ನಿನ್ನ ಸಂಗೀತಪಾಠ."

"ಅದೆಲ್ಲಿಗೆ ಹೋಗುತ್ತದೆ. ರಜೆ ಮುಗಿದ ಮೇಲೆ ಮತ್ತೆ ಆರಂಭಿಸಿದ ರಾಯಿತು."

"ನನ್ನಲ್ಲಿರುವ ಹಣ ಸಾಲದಲ್ಲಾ."

"ಹಣದ ಕೊರತೆಯೇಕಯ್ಯಾ. ಕೈಯಲ್ಲಿ ನಾಲ್ಕು ನೂರು ರೂಪಾಯಿ ಗಳಿವೆ. ಅವಕಾಶವಾದಾಗ ಒಂದೆರಡು ಚಿತ್ರಗಳನ್ನು ರಚಿಸಿ 'ಮಧುಕರ'ಕ್ಕೆ ಕೊಟ್ಟುಬಿಟ್ಟರಾಯಿತು."

"ಹಾಗಾದರೆ ಸರಿ. ನೀನು ಗಂಗೂಲಿಯವರನ್ನು ನೋಡಬೇಕೆಂದಿದ್ದೆ —ಬೇಕಾದರೆ ಅವರನ್ನು ಈಗ ನೋಡಬಹುದು."

"ಈಗ ನೋಡುವುದು ಬೇಡ. ನನ್ನ ಮೈಸೂರು ಗೆಳೆಯರನ್ನೂ ನೋಡುವುದಿಲ್ಲ........ಸುಖವಾಗಿ ಎಲ್ಲಿಯಾದರೂ ಯಾರೂ ಕಾಣದಂತೆ ಇದ್ದುಬಿಡೋಣ."

"ಸಮ್ಮತ – ಪ್ರಯಾಣ ಯಾವಾಗ?"

"ನಾಳೆ. ಮೆಯಿಲ್ ಗಾಡಿಗೆ."

೧೬

ಬೇಸಿಗೆ ರಜೆ ಮುಗಿಯುತ್ತ ಬಂತು. ಎಷ್ಟು ಹೊತ್ತಿಗೆ ಮಾಣಿಯನ್ನು ಕಾಣುವೆನೋ ಎಂಬ ಕುತೂಹಲ ನೀಲರಂಜನನನ್ನು ಕೊರೆಯುತ್ತಿತ್ತು. 'ತಾನು ಬರೆದ ಅಷ್ಟೊಂದು ಕಾಗದಗಳಿಗೆ ಮಾಣಿಯೇತಕ್ಕೆ ಮಾರುತ್ತರ ಬರೆಯಲಿಲ್ಲ. ಊರಿನಲ್ಲಿರಲಿಲ್ಲವೇನೋ—ಎಲ್ಲಿಗೂ ಹೋಗುವುದಿಲ್ಲವೆಂದು ಹೇಳಿದ್ದನಲ್ಲಾ—ಹೋದರೂ ನನಗೆ ಹೇಳದೆ ಹೋಗುವನೇ?' ಎಂದು ತನ್ನಲ್ಲಿಯೇ ತರ್ಕ ಮಾಡಿಕೊಂಡು ಬೋಲಪುರವನ್ನು ಸೇರಿದ. ಕೂಲಿಯಾಳಿನ ಕೈಲಿ ಸಾಮಾನುಗಳನ್ನು ಹೊರಿಸಿಕೊಂಡು ಮಾಣಿಗಾಗಿ ಮನೆಯಿಂದ ಮಾಡಿಸಿ ತಂದಿದ್ದ ತಿಂಡಿಯ ಸಾಮಾನನ್ನು ತಾನೇ ಕೈಯಲ್ಲಿ ಹಿಡಿದುಕೊಂಡು ಶಾಂತಿನಿಕೇತನವನ್ನು ಸೇರಿದ. ಅವಸರದಿಂದ ಓಡಿ ತನ್ನ ಕೋಣೆಯನ್ನು ನೋಡಿದ. ಬಾಗಿಲಿಗೆ ಬೀಗ ಹಾಕಿತ್ತು. ಆಶ್ರಮ ಸಚಿವರ ಬಳಿಗೆ ಹೋಗಿ ವಿಚಾರಿಸಲು ಅವರು ಮಾತನಾಡದೆ ನೀಲರಂಜನನ ಕೈಗೆ ಕೀಲಿಯನ್ನಿತ್ತು ಆಶ್ರಮದ ಆಸ್ಪತ್ರೆಯ ಕಡೆ ಕೈತೋರಿದರು. ನೀಲ ಕೋಣೆಯಲ್ಲಿ ಸಾಮಾನುಗಳನ್ನು ಬಿಸುಡಿ ಆಸ್ಪತ್ರೆಯ ಕಡೆಗೆ ಓಡಿದ.

ಬಾಗಿಲಲ್ಲಿಯೇ ನಿಂತಿದ್ದ ಡಾಕ್ಟರು ನೀಲನಿಗೆ ಸ್ವಾಗತ ಬಯಸಿ ಯೋಗಕ್ಷೇಮವನ್ನು ವಿಚಾರಿಸಿದರು. ಅವರು ಆಡಿದ ಒಂದು ಮಾತೂ ನೀಲರಂಜನನ ಕಿವಿಗೆ ಬೀಳಲೊಲ್ಲದು. ದುಗುಡದಿಂದ 'ಮಹಾಶಯ, ಮಾಣಿಯೆಲ್ಲಿ? ಏನು ಖಾಯಿಲೆ' ಎಂದು ಕೇಳಿದ. ಡಾಕ್ಟರು ದೀರ್ಘವಾಗಿ ನಿಟ್ಟುಸಿರ್ಗರೆದು ಮಾಣಿಯ ಹಾಸಿಗೆಯ ಬಳಿ ಕರೆದೊಯ್ದರು. ಜ್ವರದಿಂದ ಬೆಂದು ಸೀದು ಹೋಗಿದ್ದ ಮುಖವನ್ನು ನೋಡಿ ದುಃಖದಿಂದ

ಮುಖ ಮುಚ್ಚಿಕೊಂಡ. ಆಗ ತಾನೆ ರೋಗಿಗೆ ನಿದ್ರೆ ಹತ್ತಿರಲು ಡಾಕ್ಟರು ನೀಲರಂಜನನ್ನು ತಮ್ಮ ಆಫೀಸಿಗೆ ಕರೆದುಕೊಂಡು ಹೋದರು. ಮಾಣಿ ಕಾಹಿಲೆ ಇರುವಾಗ ಅವನ ವಿಚಾರ ಅನ್ಯಥಾ ಭಾವಿಸಿಕೊಂಡುದು ತನ್ನ ತಪ್ಪಾಯಿತೆಂದು ತುಂಬಾ ವಿಷಾದಗೊಂಡ. ಡಾಕ್ಟರನ್ನು ಕುರಿತು

"ಏನು ಕಾಹಿಲೆ ಮಹಾಶಯ ?"

ಡಾಕ್ಟರ ನಿಟ್ಟುಸಿರೇ ಅದಕ್ಕೆ ಬಂದ ಉತ್ತರ.

"ನನ್ನಲ್ಲಿ ಹೇಳಿ ಮಹಾಶಯ. ನಾನು ಮಾಣಿಗೆ ಬೇರೆ...."

"ನನಗೆ ಗೊತ್ತು ಬಾಬು. ಆದರೆ ಯಾರಿಗೂ ತಿಳಿಯಬಾರದೆಂದು ನಾನೇ ಟೈಫಾಯಿಡ್ ಎಂದು ಹೇಳುತ್ತಾ ಬಂದಿದ್ದೇನೆ."

"ಹಾಗಾದರೆ ಟೈಫಾಯಿಡ್ ಅಲ್ಲವೇ ?"

"ಅಲ್ಲ – ಅದಕ್ಕೂ ಮಹಾ ಭಯಂಕರ."

"ಯಾವುದು – ಹೇಳಿ – ನನ್ನಲ್ಲಿ ಹೇಳಿ."

ಕಾತರದಿಂದ ಬೇಡುತ್ತಿದ್ದ ನೀಲರಂಜನನ ಕಿವಿಯಲ್ಲಿ ಮೆಲ್ಲನೆ ರೋಗದ ಹೆಸರನ್ನುಸುರಿದರು. ನೀಲರಂಜನ ಅವಾಕ್ಕಾದ. ಅವನ ದೃಕ್ಪಥದ ಮೇಲೆ ಅವನೀಶನ ಸ್ನೇಹ – ಈ ಮೂರು ತಿಂಗಳು ನಡೆಸಿದ ಜೀವನ ತೇಲಿದವು. ತನ್ನನ್ನೇ ದೂಷಿಸಿಕೊಂಡ. ಮಾಣಿಯನ್ನು ತಾನು ಬಿಟ್ಟು ಹೋಗಬಾರದಾಗಿತ್ತೆಂದು ಹಲುಬಿದ. ಬೇರೊಂದು ಭಯ ಮೂಡಿತು. ಮತ್ತೆ ಡಾಕ್ಟರನ್ನು ಕುರಿತು

"ಪ್ರಾಣಕ್ಕೆ ಭಯವಿಲ್ಲವೆ ಮಹಾಶಯ."

"ಸದ್ಯಕ್ಕೆ ಆ ದೆಸೆ ದಾಟಿದೆ. ಬಹಳ ನಿಶ್ಶಕ್ತಿ. ಇನ್ನೂ ಒಂದೆರಡು ತಿಂಗಳು ಏನೂ ಮಾಡುವುದಕ್ಕಾಗುವುದಿಲ್ಲ. ಪೂರ್ಣ ವಿಶ್ರಾಂತಿ ಬೇಕು. ನೀನು ಮಲಗು ಹೋಗು ಬಾಬು. ನಾನು ಜೋಕೆಯಿಂದ ನೋಡಿ ಕೊಳ್ಳುತ್ತೇನೆ."

"ನಾನು.........ತಮ್ಮ ಅಪ್ಪಣೆಯಾದರೆ........ನೋಡಿಕೊಳ್ಳುತ್ತೇನೆ ಮಹಾಶಯ."

ಮುಂದೆ ಹೇಳಲಾರದೆ ಕಣ್ಣುಗಳಲ್ಲಿ ಹನಿ ತುಂಬಿದವು. ಡಾಕ್ಟರು

"ಇಂದು ತುಂಬಾ ಆಯಾಸಗೊಂಡಿರುವೆ. ವಿಶ್ರಮಿಸಿಕೊಳ್ಳಹೋಗು.

ನಾಳೆಯಿಂದ ನೀನೇ ನೋಡಿಕೊಳ್ಳುವೆಯಂತೆ – ಅಲ್ಲದೆ ಮಾಣಿ ಏಳುತ್ತಲೂ ನೀನು ಬಂದಿರುವ ಸುದ್ದಿಯನ್ನು ತಿಳಿಸುತ್ತೇನೆ" ಎಂದು ಸಮಾಧಾನ ಹೇಳಿ ಕಳುಹಿಸಿಕೊಟ್ಟರು. ನೀಲರಂಜನನಿಗೆ ಊಟ ನಿದ್ರೆಗಳು ಬೇಡ ವಾದವು. ಕೋಣೆಯಲ್ಲಿ ಮಾಣಿಯ ಹಾಸಿಗೆ ಪದಾರ್ಥಗಳಿದ್ದ ಜಾಗವನ್ನೇ ನೋಡುತ್ತ ಕುಳಿತ. ಮಾಣಿಗೊದಗಿದ್ದ ವಿಪತ್ತು ಅವನ ಹೃದಯವನ್ನು ಝಲ್ಲೆನಿಸಿಬಿಟ್ಟಿತ್ತು. ರಾತ್ರಿಯೆಲ್ಲಾ ಅದೇ ಯೋಚನೆಯಲ್ಲಿ ಮುಂದಕ್ಕೆ ಹೋಗಲಾರದ ಹೊತ್ತನ್ನು ನೂಕುತ್ತ ಕಾಲಕಳೆದ.

ಬೆಳಗಾಯಿತು. ರವಿಯ ಹೊಂಬೆಳಕನ್ನು ನೋಡಿ ನೀಲನ ಮನಸ್ಸಿನಲ್ಲಿಯೂ ಉದಯರಾಗ ಮೂಡಿತು. 'ನಿನ್ನಿನ ಕತ್ತಲೆ ಹರಿದು, ಇಂದು ಉದಯರಾಗ ಮೂಡಿದಂತೆ ಮಾಣಿಯ ಜೀವನದ ಕತ್ತಲೆಯೂ ಬೇಗ ಹರಿದು, ಉದಯರಾಗ ಮೂಡುವುದು' ಎಂದು ಅಂದುಕೊಂಡ. ಎದ್ದು ಪ್ರಾತರ್ವಿಧಿಯನ್ನು ತೀರಿಸಿಕೊಂಡು ಆಸ್ಪತ್ರೆಯ ಬಳಿಗೆ ಓಡಿದ. ಮಾಣಿ ಸ್ನಾನ ತೀರಿಸಿಕೊಂಡು ಮಲಗಿದ್ದ. ಡಾಕ್ಟರು ನೀಲನ ಬರುವನ್ನು ತಿಳಿಸಿದ್ದರು. ಎಷ್ಟು ಹೊತ್ತಿಗೆ ಬರುವನೋ ಎಂಬ ಆಶೆಯಿಂದ ಮನಸ್ಸು ಬಡಬಡಿಸುತ್ತಿತ್ತು.

ನೀಲ ಬಂದು ಎದುರಿಗೆ ನಿಂತ. ನಾಲ್ಕು ಕಣ್ಣುಗಳು ಕೂಡಿದವು.

"ಮಾಣೀ—" ಎಂದು ಅಪ್ಪಿದ.

"ನೀಲಾ....ಬಂದೆಯಾ. ನೀಲಾ" ಎಂದು ನೀಲನನ್ನು ಅಪ್ಪಿ ತಾಯಿಯ ಪುನರ್ದರ್ಶನ ಪಡೆದ ಮಗುವಿನಂತೆ ಮಾಣಿ ಕಂಬನಿ ಗರೆದ. ಆವೇಗ ತೀರಿದ ಮೇಲೆ ಸೂಕ್ಷ್ಮವಾಗಿ ಮಾಣಿ ತನ್ನ ಖಾಯಿಲೆಯ ಕಾರಣವನ್ನು ಸೂಚಿಸಿದ.

"ಕ್ಷಮಿಸು ನೀಲಾ! ನಿನ್ನ ಗೆಳೆತನಕ್ಕೆ ನಾನು ಅಪಾತ್ರ."

ಸರಳವಾದ ಒಂದು ಮುಗುಳ್ನಗೆಯಿಂದ ಮಾಣಿಯನ್ನು ನೇವರಿಸಿ ಗೆಳೆತನಕ್ಕೆ ಪಾತ್ರಾಪಾತ್ರತೆಯ ಬಂಧನವಿಲ್ಲವೆಂದು ನೀಲರಂಜನ ತೋರಿಸಿದ.

"ಅವನೀಶನೆಲ್ಲಿ ಮಾಣಿ ?"

"ಅವನು ಆಶ್ರಮುವನ್ನು ಬಿಟ್ಟುಬಿಟ್ಟ—ಬಡೋದೆಯಲ್ಲಿ ಗಾನವನ್ನು ಕಲಿಯಲಿಕ್ಕೆ..........."

ನೀಲನ ಮನಸ್ಸಿನ ದೊಡ್ಡಭಾರ ಇಳುಹಿದಂತಾಯಿತು. ಮಾಣಿಯ ಮನಸ್ಸು ಬೇರೆ ಕಡೆಗೆ ತಿರುಗಿ ತನ್ನ ನೋವನ್ನು ಸ್ವಲ್ಪ ಮರೆಯಲೆಂದು ತನ್ನ ಪ್ರವಾಸದ ವರದಿಯನ್ನು ಒಪ್ಪಿಸಿ, ಅನಂತದಯೆಯಿಂದ ಕೂಡಿದ ದನಿಯಿಂದ

"ಚಿಂತಿಸಬೇಡ ಮಿತ್ರಾ, ಬಂದಿರುವ ವಿಪತ್ತು ಬೇಗ ನೀಗುವುದು. ಎಲ್ಲವೂ ಎಂದಿನಂತೆ ಸರಿಹೋಗುವುದು" ಎಂದು ಸಮಾಧಾನಗೊಳಿಸಿದ. ಕೃತಜ್ಞತೆ ಮಾಣಿಯ ಕಣ್ಣುಗಳಲ್ಲಿ ಮಿಂಚಿ ಅವನ ಮುಖಕ್ಕೆ ಹೊಸ ಹೊಳಪನ್ನಿತ್ತಿತು.

ಒಂದು ತಿಂಗಳು ಕಳೆಯುವಷ್ಟರಲ್ಲಿ ಮಾಣಿಗೆ ಪೂರ್ಣ ಗುಣವಾಗುತ್ತ ಬಂತು. ಎದ್ದು ಓಡಿಯಾಡುವಷ್ಟು ದೇಹಕ್ಕೆ ಶಕ್ತಿಯೂ ಕೂಡುತ್ತ ಬಂತು. 'ಇನ್ನೂ ಕೆಲವು ದಿವಸ ಅಭ್ಯಾಸಕ್ಕೆ ಕೂಡುವುದು ಬೇಡ' ಎಂದು ಡಾಕ್ಟರರ ಆಜ್ಞೆಯಾಗಿದ್ದುದರಿಂದ ತನ್ನ ಕೋಣೆಯಲ್ಲಿಯೇ ಕುಳಿತು ಗ್ರಂಥಗಳನ್ನು ಓದುತ್ತ ವಿಶ್ರಮಿಸಿಕೊಳ್ಳುತ್ತಿದ್ದ. ಈ ಖಾಯಿಲೆ ಮಾಣಿಗೆ ಹೊಸ ಅನುಭವವನ್ನು ಕೊಟ್ಟಿತ್ತು. ಕಲ್ಕತ್ತೆಯ ಎರಡು ತಿಂಗಳ ಜೀವನದಿಂದ ಬಾಳಿನ ಸುಂದರ ತೆರೆಯ ಹಿಂದೆ ಅಡಕವಾಗಿದ್ದ ಮೋಸ, ಕಾಪಟ್ಯ, ಕ್ರೌರ್ಯಗಳ ಅರಿವವನಿಗಾಯಿತು. ಆಸ್ಪತ್ರೆಯ ವಾಸದಿಂದ ಅವನೀಶ ನಂತಹ ಗೆಳೆಯರಿಗೂ ನೀಲನಂತಹ ಗೆಳೆಯರಿಗೂ ಇರುವ ವ್ಯತ್ಯಾಸ ತಿಳಿಯುತ್ತ ಬಂತು. ಎಲ್ಲಕ್ಕೂ ಹೆಚ್ಚಾಗಿ ತನ್ನ ಮನಸ್ಸು ಎಷ್ಟು ದುರ್ಬಲ —ಎಷ್ಟು ಶಕ್ತಿಹೀನ—ಎಷ್ಟು ಸಣ್ಣದಾದ ವಿಲೋಭನೆಗಳಿಗೆ ಅಧೀನ ವಾಗುವ ಪಾರತಂತ್ರ್ಯ ಎಂದು ಚಿಂತಿಸಿದ. ಕವಿಗಳು, ಶಿಲ್ಪಿಗಳು, ಗಾಯಕರು ತೋರಿಸುವಂತೆ ಜೀವನ ಕೇವಲ ಶಕ್ತಿ, ಸಂಯಮ, ಮನೋದಾರ್ಢ್ಯಗಳಿಂದ ಮಾತ್ರವೇ ಕೂಡಿಲ್ಲ; ಅದಕ್ಕೂ ಹೆಚ್ಚಾದ ದುಶ್ಶಕ್ತಿ, ವಿಲೋಭನೆ, ಮನಶ್ಚಾಂಚಲ್ಯಗಳಿಂದ ಕೂಡಿದೆಯೆಂದು ಮನಗಂಡ. ಸುಂದರವಾದುದರ ಪರಿಚಯವನ್ನು ಲೋಕಕ್ಕೆ ಹೇಗೆ ಕಲೆ ಉಂಟುಮಾಡಿಕೊಡುತ್ತದೆಯೋ ಹಾಗೇ ಸುಂದರವಲ್ಲದುದರ ಪರಿಚಯವನ್ನೂ ಏತಕ್ಕೆ ಮಾಡಿಕೊಡ

ಬಾರದು ?—ಜೀವನದ ಎರಡು ಸ್ವರೂಪಗಳನ್ನೂ ಸರಿಯಾಗಿ ನೋಡಿ ಜನತೆ ತನ್ನ ಪ್ರಗತಿಯನ್ನು ಸಾಧಿಸಿಕೊಳ್ಳಲಿ. ಲೋಕ ಎಲ್ಲ ಸುಂದರವೇ ಎಂಬ ತಪ್ಪು ಕಲ್ಪನೆಯಿಂದಲೇ ಆರಂಭಿಸಿ ಹೆಜ್ಜೆಹೆಜ್ಜೆಗೂ ಎಡಹುವು ದೇತಕ್ಕೆ ? ಎಂದು ಪ್ರಶ್ನಿಸಿಕೊಂಡ. ಬೆಲೆವೆಣ್ಣುಗಳೆಲ್ಲಾ ರೂಪಳಂತೆಯೇ ಅಲ್ಲವೆ ಎಂದು ಭಾವಿಸಿಕೊಂಡದಕ್ಕಲ್ಲವೇ ತನಗೀ ದುರವಸ್ಥೆ ಬಂದುದು ? ಎಂದು ಚಿಂತಿಸುತ್ತಾ ತನ್ನ ಕಲೆಯ ಮೂಲಕ ಜಗತ್ತಿಗೆ ಸತ್ಯದ ಪರಿಚಯ ಮಾಡಿಕೊಡುತ್ತ ಹೋಗಬೇಕೆಂದು ನಿರ್ಧರಿಸಿಕೊಂಡ. ಕಲಾವಿದರು ತಮ್ಮ ಕೃತಿಗಳಲ್ಲಿ ತೋರಿಸಲು ಹಿಂಜರಿಯುತ್ತಿದ್ದ ನೋವಿನ, ದುಃಖದ, ಕಲ್ಮಷದ ಯಥಾರ್ಥಸ್ವರೂಪವನ್ನು ತಾನು ತೋರಿಸಕೊಡ ಬೇಕೆಂದು ಶಪಥಮಾಡಿದ.

ಆದರೆ ಈ ನಿರ್ಧಾರ ತನ್ನನ್ನು ಎಲ್ಲಿಗೆ ಒಯ್ಯಬಹುದೆಂಬ ಕಲ್ಪನೆ ಮಾಣಿಗೆ ಬರಲಿಲ್ಲ. ಜೀವನದ ಒಂದೆರಡು ಅನುಭವಗಳಿಂದ ಅವರ ಉದ್ದಗಲವನ್ನು ಅಳೆಯ ಹೊರಟಾಗ ಕಣ್ಣಿಗೆ ಬೀಳುವುದು ಯಥಾರ್ಥ ಸ್ವರೂಪವಲ್ಲ; ಅದರ ವಿಪರ್ಯಾಸವೆಂಬ ಜ್ಞಾನ ಆಗ ಮಾಣಿಗೆ ಹೊಳೆಯಲಿಲ್ಲ.

ಎಂದಿನಂತೆ ವ್ಯಾಸಂಗ ಸಾಗುತ್ತಾ ಬಂತು. ಮೊದಲಿಗಿಂತಲೂ ಹೆಚ್ಚಿನ ಆಸಕ್ತಿಯನ್ನು ಮಾಣಿ ಕಲಾಭ್ಯಾಸದಲ್ಲಿ ತೋರಿಸುತ್ತಿರುವುದನ್ನು ಕಂಡು ನಂದಲಾಲ ಗುರುಗಳು ತುಂಬಾ ಸಂತೋಷಭರಿತರಾದರು. ನೀಲರಂಜನನಿ ಗಂತೂ ಗೆಳೆಯನ ಕಲಾಪ್ರಗತಿಯನ್ನು ಕಂಡು ಹಿಡಿಸಲಾರದಷ್ಟು ಸಂತೋಷ. ಆದರೆ ಮಾಣಿಯ ಮನಸ್ಸಿನಲ್ಲಾಗುತ್ತಿದ್ದ ಘೋರಸಂಗ್ರಾಮ ಇಬ್ಬರ ಕಣ್ಣಿಗೂ ಬೀಳಲಿಲ್ಲ. ತನ್ನ ಅಂತರಂಗದ ವಿಪ್ಲವ ಹೊರಗೆ ಗೊತ್ತಾಗದಿರಲೆಂದು ಮಾಣಿ ಉಗ್ರಸಾಧಕ ವೃತ್ತಿಯನ್ನು ಅವಲಂಬಿಸಿರುವುದು ಅವನ ಗಮನಕ್ಕೆ ಬರಲಿಲ್ಲ. ಒಂದು ಕಾಲದಲ್ಲಿ ಸಂಗೀತದಲ್ಲಿ ಉಂಟಾಗಿದ್ದ ಆಸಕ್ತಿಯೂ ಕಡಿಮೆಯಾಗುತ್ತಾ ಬಂದಿತು.

ಕಲ್ಕತ್ತೆಯ ಕಡೆಗೆ ಮನಸ್ಸು ಎಳೆಯುತ್ತಿದ್ದರೂ ಪೂರ್ವಾನುಭವದ ಸ್ಮರಣೆ ಅವನನ್ನು ತಡೆಯುತ್ತಿತ್ತು. ಒಂದೊಂದು ಸಲ 'ಕಲೆಯಲ್ಲಿ ಕಲಿತು ಬರುವುದೇನು ?'—ಚಿತ್ರಕಲೆಯ ಲಕ್ಷಣವನ್ನೂ ತಿಳಿದದ್ದಾಯಿತು.

ಸಾಕಷ್ಟು ಕಾಲ ಗುರುಚರಣತಲದಲ್ಲಿ ಕುಳಿತು ಕಲಿತದ್ದೂ ಆಯಿತು. ಇನ್ನು ಏತಕ್ಕೆ ಸ್ವತಂತ್ರವಾಗಿ ಕಲಾವ್ಯವಸಾಯವನ್ನಾರಂಭಿಸಬಾರದು" ಎಂದು ಮಾಣಿಯ ಮನಸ್ಸಿಗೆ ಬಂದಿತು. ಒಂದು ದಿವಸ ಧೈರ್ಯಮಾಡಿ ನಂದಲಾಲರಲ್ಲಿ ಆ ವಿಚಾರವನ್ನು ಪ್ರಸ್ತಾಪಿಸಿದುದಕ್ಕೆ ಅವರು ಗುಂಭವಾಗಿ 'ಕಲೆಯಲ್ಲಿ ಕಲಿಯುವುದು ಮುಗಿಯುವುದೇ ಇಲ್ಲ' ಎಂದು ಉತ್ತರವಿತ್ತಿದ್ದುದು ಅವನಿಗೆ ತಾತ್ಕಾಲಿಕ ಸಮಾಧಾನವನ್ನುಂಟುಮಾಡಿತ್ತು.

ಶಿಷ್ಯನಲ್ಲಿ ಬೆಳೆಯುತ್ತಿದ್ದ ವಿಚಿತ್ರ ಮನಃಪ್ರವೃತ್ತಿ ನಂದಲಾಲ ಗುರುಗಳ ಗಮನಕ್ಕೆ ಬಾರದೆ ಹೋಗಲಿಲ್ಲ. ತಮ್ಮ ಮೇಲ್ಪಂಕ್ತಿಗೆ ವಿರುದ್ಧವಾದ ಮಾರ್ಗವನ್ನು ಮಾಣಿ ಅನುಸರಿಸುತ್ತಿದ್ದುದೂ, ಪ್ರತಿಯೊಂದು ಸಂದರ್ಭದಲ್ಲಿ ತನ್ನ ಮಾರ್ಗವನ್ನು ಸರಿಯೆಂದು ಸಾರಲು ಎದೆ ತಟ್ಟಿ ನಿಲ್ಲುತ್ತಿದ್ದುದೂ ಅವರಿಗೆ ಒಂದು ಬಗೆಯ ಆನಂದವನ್ನೇ ಇತ್ತಿದ್ದರೂ ಸಾಧಕಸ್ಥಿತಿಯ ಚಿತ್ತೈಕಾಗ್ರತೆಗೆ ಈ ಅಡ್ಡಹಾದಿ ವಿಘ್ನ ತರುತ್ತದೆ ಎಂದು ದೃಢವಾಗಿ ನಂಬಿದ್ದರು. ಪ್ರತಿಯೊಂದು ಕೃತಿಯನ್ನೂ ಬೇಗ ಬೇಗ ಮುಗಿಸಿ ಹೊಸ ಹೊಸ ಕೃತಿಗಳಿಗೆ ಕೈಹಾಕುವ ಚಪಲ ಮಾಣಿಯಲ್ಲಿ ಕಾಣಬರುತ್ತಿದ್ದಿತೇ ವಿನಾ ನೈಪುಣ್ಯ ತೋರಿಸುವ ಕಡೆಗೆ ಅವನ ಲಕ್ಷ್ಯ ಅಷ್ಟಾಗಿ ಹೋಗುತ್ತಿರಲಿಲ್ಲ. ಈಚೆಗಂತೂ ಚಿತ್ರದ ಸ್ಥೂಲಾಭಿಪ್ರಾಯ ಹೇಗಾದರೂ ಸರಿ ನೋಟಕನಿಗೆ ತಿಳಿದರೆ ಸಾಕು, ಅದರಲ್ಲಿ ಸೂಕ್ಷ್ಮವಾದ ಕಲಾಪ್ರತಿಭೆಯಿರದಿದ್ದರೂ ಚಿಂತೆಯಿಲ್ಲ ಎಂಬ ತತ್ತ್ವದ ಜನಕನಾಗಿ ಮಾಣಿ ತನ್ನ ಕೃತಿಗಳ ಮೂಲಕ ಅದನ್ನು ಸಹಪಾಠಿಗಳಿಗೆ ಬೋಧಿಸತೊಡಗಿದ.

ಒಂದು ದಿನ 'ಮಧುಕರ' ಕಾರ್ಯಾಲಯದಿಂದ ಬಂದ ಪತ್ರ ಮಾಣಿಯನ್ನು ಅಲ್ಲೋಲಕಲ್ಲೋಲ ಮಾಡಿಬಿಟ್ಟಿತು.

"ಮಹಾಶಯ,

ಈಚೆಗೆ ನಾವು ಪ್ರಕಟಿಸಿದ ತಮ್ಮ 'ಅಪ್ಸರೆ' ಎಂಬ ನಗ್ನಚಿತ್ರ ನಮ್ಮ ಪಾಠಕರ ಗಮನವನ್ನು ವಿಶೇಷವಾಗಿ ಸೆಳೆದಿದೆ. ನಾವು ಪ್ರಕಟಿಸಿದ ಅನೇಕ ಚಿತ್ರಗಳಿಗಿಂತಲೂ ಅದು ಉತ್ತಮವಾಗಿದೆಯೆಂದು ಬಹಳ ಮಂದಿಯ ಅಭಿಪ್ರಾಯ. ತಾವು ದಯೆಯಿಟ್ಟು ಒಪ್ಪಿ ಬಂದು ನಮ್ಮ ಸಂಪಾದಕ ಮಂಡಳಿ ಸೇರಿ 'ಚಿತ್ರಶಾಖೆ'ಯ ವ್ಯವಸ್ಥಾಪಕರಾದರೆ ಬಹಳ

ಸಂತೋಷಿಸುವೆವು. ಆರಂಭದಲ್ಲಿ ೧೫೦ ರೂ.ಗಳ ಮಾಸಾಶನ ಕೊಡಲು ನಮ್ಮ ಮಂಡಳಿ ಒಪ್ಪಿರುತ್ತದೆ. ತಾವು ನಮಗಾಗಿ ರಚಿಸುವ ಚಿತ್ರಗಳನ್ನಳಿದು ಬೇರೆ ಚಿತ್ರಗಳು ಬೇಕಾದಲ್ಲಿ ಅವುಗಳನ್ನು ಉಚಿತ ಬೆಲೆಗೆ ಕೊಳ್ಳಲು ಸಿದ್ಧರಿದ್ದೇವೆ.

ತಾವು ಈ ವಿನಂತಿಯನ್ನು ಮಾನ್ಯಮಾಡಿ ಕೂಡಲೆ ಮಾರೋಲೆ ಬರೆಯಬೇಕಾಗಿ ಪ್ರಾರ್ಥನೆ.

ಇಂತು ಅನೇಕ ನಮಸ್ಕಾರಗಳು
**ಸುರೇಶಬಾಬು**

ಇಂತಹ ಅವಕಾಶ ಬಿಟ್ಟರೆ ಮುಂದೆ ಪಶ್ಚಾತ್ತಾಪಪಡಬೇಕಾಗುವುದೇನೋ ಎಂಬ ಚಿಂತೆ. ಆದರೆ ಐದು ವರ್ಷ ವ್ಯಾಸಂಗ ಮಾಡುತ್ತೇನೆಂದು ಗುರುದೇವನಿಗೆ ಮಾತುಕೊಟ್ಟು ಈಗ ವಚನಭ್ರಷ್ಟನಾಗುವುದೇ ಎಂಬ ಕೊರಗು. ನೀಲರಂಜನನ ಸಲಹೆ ಕೇಳಿ ಅನಂತರ ಗುರುದೇವನಲ್ಲಿ ವಿಷಯ ಪ್ರಸ್ತಾಪಿಸುವುದೆಂದು ನಿರ್ಧರಿಸಿದ.

ಪತ್ರವನ್ನು ಆಗತಾನೆ ಕೋಣೆಗೆ ಬಂದ ನೀಲನ ಕೈಗೆ ಅದೂ ಇದೂ ಮಾತನಾಡುತ್ತ ಮೆಲ್ಲನಿತ್ತ. ನೀಲ ಓದಿಕೊಂಡು ಮರುಮಾತನಾಡದೆ ಮಾಣಿಗೆ ಹಿಂದಕ್ಕಿತ್ತು ಸುಮ್ಮನಿದ್ದ.

"ಏನು ಹೇಳುತ್ತೀ ನೀಲಾ? ಸುರೇಶಬಾಬುವಿಗೆ ಏನೆಂದು ಉತ್ತರ ಬರೆಯಲಿ?"

"ನಿನಗೆ ಹೇಗೆ ಸೂಕ್ತವೋ ಹಾಗೆ ಬರೆ."

"ನನಗೆ ಸೂಕ್ತತೋರಿದಂತೆ ಬರೆಯಲು ನಿನ್ನ ಸಲಹೆ ಕೇಳಬೇಕಾಗಿತ್ತೇನು? ಇದಕ್ಕೆ ನೀನೇನು ಹೇಳುವೆ??

"ಗುರುಗಳನ್ನೊಮ್ಮೆ ಕೇಳಿ ಬಿಡು. ಅನಂತರ ಬೇಕಾದರೆ ಮಾತನಾಡೋಣ."

"ಹಾಗೆಯೇ ಆಗಲಿ ನಡೆ." ಎಂದಿಬ್ಬರೂ ನಂದಲಾಲರ ಮನೆ ಕಡೆ ಹೊರಟರು. ಮನೆಯ ಕೈಸಾಲೆಯಲ್ಲಿ 'ಪ್ರಬಾಸಿ' ಪತ್ರಿಕೆಯನ್ನೋದುತ್ತ ಕುಳಿತಿದ್ದ ನಂದಲಾಲರು ಆದರದಿಂದ ಗೆಳೆಯರಿಬ್ಬರನ್ನೂ

ಬರಮಾಡಿಕೊಂಡು, ಚಹ ತರಿಸಿಕೊಟ್ಟು, ಬಂದ ವಿಷಯವೇನೆಂದು ವಿಚಾರಿಸಿದರು. ನೀಲರಂಜನ ಮಾಣಿಯಿಂದ ಕಾಗದವನ್ನು ತೆಗೆದು ಕೊಂಡು ಗುರುಗಳ ಕೈಗಿತ್ತ. ಗುರುಗಳು ಅದನ್ನು ಓದುತ್ತ ಮುಖದಲ್ಲಿ ತೇಲುತ್ತಿದ್ದ ಭಾವಗಳನ್ನು ತೋರಗೊಡದಿರಲೆತ್ನಿಸುತ್ತ ಮಾಣಿಯ ಕೈಗೆ ಕಾಗದವನ್ನಿತ್ತರು. ಮಾಣಿಗೆ ಯೋಚನೆಗಾರಂಭವಾಯಿತು. ಮುಂದಕ್ಕೆ ಮೌನವ್ರತದಿಂದ ಸುಖವಿಲ್ಲವೆಂದು ಗ್ರಹಿಸಿ

"ಏನು ಮಾಡಲಿ ಮಹಾಶಯ ?"

"ನಾನು ಏನು ಹೇಳಲಪ್ಪಾ, ಜಗನ್ಮಾತೆ ಹೇಗೆ ಬುದ್ಧಿ ಕೊಡು ತ್ತಾಳೋ ಹಾಗೆ ಮಾಡು. ನಿನ್ನ ಅಭ್ಯುದಯ ನನಗೆ ಮುಖ್ಯ."

"ಐದು ವರ್ಷಗಳು ಕಲಿಯಬೇಕೆಂದು ಹಿಂದೆ ಅಪ್ಪಣೆಯಾಗಿತ್ತು."

"ನೀನು ಹೋಗಬೇಕೆಂದು ನಿರ್ಧರಿಸುವಲ್ಲಿ ಆ ವಚನದಿಂದ ನಿನ್ನನ್ನು ವಿಮುಕ್ತನನ್ನಾಗಿಸುತ್ತೇನೆ. ಯೋಗಕ್ಕೆ ಹೇಗೋ ಹಾಗೆ ಕಲೆಗೂ ಭಯಂಕರ ಉಪಾಸನೆ ಬೇಕು – ಚಿತ್ತಶುದ್ಧಿಬೇಕು. ಇಂತಹ ಆಸೆಗೆ ಮನಸ್ಸು ಗೊಟ್ಟು ಇಲ್ಲಿ ಬಲವಂತಕ್ಕೆ ನಿಂತು ತ್ರಿಶಂಕುಸ್ವರ್ಗವಾಸಿಯಾಗುವುದ ಕ್ಕಿಂತಲೂ ಕಲ್ಕತೆಗೆ ಹೋಗುವುದೇ ಲೇಸು. ನೋಡು ಕೀರ್ತಿ, ಕನಕ, ಸುಖ, ಸಂತೋಷಗಳನ್ನೊದಗಿಸುವ ಕಲೆಗೂ, ವಿರಾಗದಲ್ಲಿ ಬೆಳೆದು ನೋವಿನ ಉಡುಗೆರೆಯನ್ನು ನೀಡುವ ಕಲೆಗೂ ಬಹಳ ವ್ಯತ್ಯಾಸವಿದೆ. ಇದರಲ್ಲಿ ದೈಹಿಕ ಸುಖವಿಲ್ಲ – ಕೀರ್ತಿಯಿಲ್ಲ. ಆದರೆ ಮನಸ್ಸಿಗೊಂದು ತೆರನ ಅವರ್ಣನೀಯ ಆನಂದವುಂಟಾಗುತ್ತದೆ. ಹಣದ ಸ್ವಾಮ್ಯಕ್ಕೆ ನಿಲುಕದ ಆನಂದ ನಿನ್ನದಾಗುತ್ತದೆ. ಇವೆರಡರ ಮಧ್ಯೆ ನೀನು ಒಂದನ್ನು ಆಯ್ದು ಕೊಳ್ಳಬೇಕು—ಯೋಚಿಸು. ದುಡುಕಬೇಡ—ನಿನ್ನ ಜೀವನದ ಪರೀಕ್ಷಾ ಸಮಯವಿದು. ನಿನ್ನ ಮುಂದಿನ ಜೀವನಕ್ಕೆ ಈಗ ಅಸ್ತಿಭಾರ ಹಾಕುವ ಸನ್ನಿವೇಶ ಒದಗಿದೆ. ಯೋಚಿಸಿ ನಿರ್ಧರಿಸು."

"ನಾನು ಎಲ್ಲೇ ಇರಲಿ ಮಹಾಶಯ—ನಿಮ್ಮ ಕೃಪೆಯನ್ನು ಮರೆಯಲಾರೆ."

"ಅದನ್ನು ಹೇಳಬೇಕೆ ಮಾಣಿ. ನನಗೆ ಗೊತ್ತುಂಟು. ನನ್ನ ಶಿಷ್ಯರೇ ನನ್ನ ಆತ್ಮ- ನೀನು ಎಲ್ಲೇ ಇದ್ದರೂ ನಂದಲಾಲ ನಿನ್ನ ಆತ್ಮೀಯ

ನೆಂಬುದನ್ನು ಮರೆಯದಿರು. ಯಾವಾಗ....ಏನು ಬೇಕಾದರೂ....ನನಗೆ ನಿರ್ವಂಚನೆಯಿಂದ ಬರೆ.” ಎಂದು ಹೇಳುತ್ತ ಗುರುಗಳ ಕಂಠ ಬಿಗಿದು ಬಂದಿತು. ಇದೊಂದು ಉತ್ತಮ ಜೀವ ತಮ್ಮ ಕೈಬಿಟ್ಟು ಹೋಗುವುದೆಂದು ಅವರ ಅಂತರ್ವಾಣಿ ಎಚ್ಚರಗೊಟ್ಟಿತು. ಮಾಣಿ ಗುರುಗಳ ಎರಡು ಪಾದ ಗಳನ್ನೂ ಹಿಡಿದು ನಮಸ್ಕರಿಸಿ ನೀಲರಂಜನನೊಂದಿಗೆ ಹೊರಟ.

ಮಾರನೆಯ ಬೆಳಿಗ್ಗೆ ಕಲ್ಕತ್ತೆಗೆ ಹೊರಟು ಬಿಡಬೇಕೆಂದು ನಿರ್ಧರಿಸಿದ. ಶಾಂತಿನಿಕೇತನದಲ್ಲಿ ತನ್ನ ಕೊನೆಯ ರಾತ್ರಿಯನ್ನು ಎದೆ ಕಲ್ಲು ಮಾಡಿ ಕಳೆಯಲು ಮನಸ್ಸು ಮಾಡಿದ. ಎಳೆ ಬೆಳದಿಂಗಳ ರಾತ್ರಿಯಲ್ಲಿ ನೀಲನೊಂದಿಗೆ ಹೊರಟು ಒಂದು ಪ್ರದಕ್ಷಿಣೆ ಮಾಡಿ ಬಂದ. ತಾನು ಮೆಚ್ಚಿ ಚಿತ್ರಕಲೆಗೆ ದಾಂಪತ್ಯ ಕೂಡಿಸಿದ್ದ ವಾತಾವರಣ ವಿರಹವ್ಯಥೆಯಿಂದ ಬಳಲುತ್ತಿರುವಂತೆ ತೋರಬಂತು. ಪರದೇಶಿಯಂತೆ ಬಂದ ತನ್ನನ್ನು ನಿರ್ವಚನೆಯಿಂದ ಸ್ವೀಕರಿಸಿ ತಾಯ್ತನವನ್ನು ತೋರಿದ ಶಾಂತಿನಿಕೇತನವನ್ನು ಬಿಟ್ಟು ಹೋಗಲು ಬಹಳ ಕಠಿಣವೆನಿಸಿತು........ಆದರೆ ಬಿಟ್ಟು ಹೋಗಲು ನಿರ್ಧರಿಸಿದ್ದ. ಎಲ್ಲಕ್ಕೂ ಹೆಚ್ಚಾಗಿ ನೀಲನನ್ನು ಬಿಟ್ಟು ಹೋಗಲು ಮನಸ್ಸು ಬಹಳ ವಿಷಾದಗೊಂಡಿತ್ತು. ದುಃಖದಾವೇಗದಲ್ಲಿ ಮಾತುಗಳು ಕೂಡಾ ಹೊರಡದಾದವು.

* * * *

ಅದೇ ಬೋಲುಪುರ........ಅದೇ ನಿಲ್ದಾಣ........ಅದೇ ರೈಲು........ ಆದರಿವೆಲ್ಲಾ ಒಂದು ಕನಸೋ ಎಂಬ ಭ್ರಮೆ ನೀಲರಂಜನನಿಗೆ. ಕನಸಾಗ ಬಾರದೇತಕ್ಕೆ ? ಸತ್ಯದ ಈ ಘೋರ ರೂಪಕ್ಕಿಂತಲೂ ಕನಸಿನ ಮಿಥ್ಯೆಯೇ ಎಷ್ಟೋ ಹಿತವೆಂದು ಅವನ ನಂಬಿಕೆ. ಎರಡು ಜೀವಗಳನ್ನು ಗೆಳೆತನದ ಭವ್ಯ ಬಂಧುರ ಬಂಧನದಿಂದ ಕೂಡಿಸಿ ಮತ್ತೆ ವಿಂಗಡಿಸುವ ಅಮಾನುಷ ಶಕ್ತಿಯನ್ನು ಶಪಿಸಿದ.

ರೈಲು ಬಂದು ನಿಂತಿತು. ಮಾಣಿ ಹತ್ತಿ ಕುಳಿತ. ನೀಲ ಹೊರಗೇ ನಿಂತು ಅವನ ಕೈ ಹಿಡಿದ. ಇಬ್ಬರ ಕಂಬನಿಗಳೂ ಕೂಡಿದವು. ಮೊದಲನೆಯ ಗಂಟೆಯೂ ಆಯಿತು. ನೀಲನ ಎದೆ ಬಡಿದುಕೊಳ್ಳ ಲಾರಂಭಿಸಿತು. ‘ನಿಜವಾಗಿಯೂ ಮಾಣಿ ನನ್ನನ್ನು ಬಿಟ್ಟು ಹೋಗುವನೇ ?

ಹೌದು ಹೋಗುವ........ಇನ್ನು ಒಂದೇ ನಿಮಿಷದೊಳಗಾಗಿ........ರೈಲೂ ಸಿದ್ಧವಾಗಿದೆ.' ಕೈ ಹಿಡಿತದಲ್ಲಿ ತನ್ನ ಆವೇಗವನ್ನು ತೋರಿದ. ಎರಡನೆಯ ಗಂಟೆಯೂ ಆಯಿತು. ರೈಲು ಮೆಲ್ಲನೆ ಮುಂದೆ ನಡೆಯಿತು. ಸ್ವಲ್ಪ ದೂರ ಹಾಗೆಯೇ ರೈಲಿನೊಂದಿಗೆ ನಡೆಯುತ್ತಾ

"ಮಾಣಿ, ಕಾಗದವನ್ನಾದರೂ ಬರೆಯುವೆಯಲ್ಲವೇ ?"

"ಖಂಡಿತವಾಗಿಯೂ ಸೀಲಾ—ಸೀಲಾ—ಸೀಲಾ" ಎಂದು ಅವನ ಮುಖ ನೇವರಿಸಿ ಸೀಲನ ಕೈಬಿಟ್ಟ. ರೈಲು ವೇಗವಾಗಿ ಹೊರಟು ಹೋಯಿತು.

೧೭

'ಪತಿತ ಪರಿವರ್ತನ'ವನ್ನು ರಚಿಸಿದ ಕೈಯೇ 'ಅಪ್ಸರೆ'ಯನ್ನೂ 'ಚಂಚಲ ಸುಂದರಿ'ಯನ್ನೂ ರಚಿಸಿತೆಂದು ಮೂರ್ತಿ ನಂಬಲೊಪ್ಪ. ನಿರ್ವಹಣದಲ್ಲಿ ಅದೇ ಕೈವಾಡ—ಅದೇ ತೆರನ ಆತ್ಮನಂಬಿಕೆ—ಬಣ್ಣಗಳ ಸಾಮರಸ್ಯ—ಆದರೂ ಆ ಚಿತ್ರಗಳ ಕರ್ತೃ ಇದನ್ನೂ ಸೃಷ್ಟಿಸಿದ್ದಾನೆಂದು ನಂಬಲು ಒಪ್ಪದಿರಲು ಸಾಧನಗಳನ್ನು ಹುಡುಕಲೆತ್ನಿಸಿದ. ಮಣೀಂದ್ರನ ಪೂರ್ವೋತ್ತರವನ್ನು ತಿಳಿಸಹೇಳಿ ಆನಂದ ಕಾರ್ಯಾಲಯಕ್ಕೆ ಬರೆದಿದ್ದ ಪತ್ರಕ್ಕೆ

"ಮಹಾಶಯ,

ಬಾಬು ಮಣೀಂದ್ರರು ಕೆಲವು ಕಾಲ ಶಾತಿನಿಕೇತನ ಕಲಾಶಾಲೆಯ ಆಚಾರ್ಯರಾದ ನಂದಲಾಲ ಬಸುಯವರಲ್ಲಿ ವ್ಯಾಸಂಗ ಮಾಡಿದರು. ಈಗ ನಮ್ಮ ಕಾರ್ಯಾಲಯದಲ್ಲಿ ಕಲಾವಿಭಾಗದ ಅಧಿಕಾರಿಗಳಾಗಿದ್ದಾರೆ. ಇಷ್ಟಲ್ಲದೆ ಅವರ ವಿಚಾರ ಹೆಚ್ಚು ವಿಷಯಗಳನ್ನು ತಿಳಿಸಲಾಗುವುದಿಲ್ಲವೆಂದು ಖಂಡಿತವಾಗಿ ಬರೆಯಲು ತುಂಬಾ ವಿಷಾದಿಸುತ್ತೇನೆ.

ತಮ್ಮ
**ಸುರೇಶಬಾಬು**
ಸಂಪಾದಕ 'ಮಧುಕರ'"

ಎಂದು ಉತ್ತರ ಬಂದಿತ್ತು. ಇತ್ತೀಚೆಗೆ 'ಮಧುಕರ'ದಲ್ಲಿಯೂ ಮತ್ತೆ ಕೆಲವು ಬಂಗಾಳೀ ಪತ್ರಿಕೆಗಳಲ್ಲಿಯೂ ಪ್ರಕಟವಾಗುತ್ತಿದ್ದ ಮಣೀಂದ್ರನ ಚಿತ್ರಗಳು ವಾಚಕರ ಗಮನವನ್ನು ವಿಶೇಷ ಸೆಳೆದಿದ್ದರೂ ಮೂರ್ತಿ ಮಾತ್ರ ಅವುಗಳ ಬಗ್ಗೆ ಒಂದೇ ಬಗೆಯ ಅಸಹನೆ ತೋರುತ್ತ ಬಂದಿದ್ದ. ಮಣೀಂದ್ರನ ಚಿತ್ರಗಳಿಗೆ ಇನ್ನು 'ಆನಂದ'ದಲ್ಲಿ ಖಂಡಿತವಾಗಿಯೂ ಎಡೆ ಕೊಡಬಾರ ದೆಂದು ಹಟ ಹಿಡಿದಿದ್ದ. ಆದರೆ ಮುಕುಂದರಾಯರು ಅವನ ಆಶೆಯನ್ನು ಈಡೇರಿಸುವಂತಿರಲಿಲ್ಲ. ಮಣೀಂದ್ರನ ನಗ್ನ ಮತ್ತು ಅರ್ಧನಗ್ನ ಚಿತ್ರ ಗಳಿಗಾಗಿಯೇ ಎಷ್ಟೋ ಮಂದಿ ಆ ಪತ್ರಿಕೆಯನ್ನು ಪ್ರೋತ್ಸಾಹಿಸುತ್ತಿದ್ದರು. ಕುಂಟುತ್ತ ಎಡವುತ್ತಲೇ ಬಂದಿದ್ದ ಪತ್ರಿಕೆಯ ಅಸ್ತಿತ್ವ ಸ್ಥಿರವಾಗುವ ವೇಳೆಗೆ ಯಾವದೋ ಆದರ್ಶದ ದೃಷ್ಟಿಯಿಂದ ಅದನ್ನು ಅಲುಗಿಸುವುದು ರಾಯರಿಗೆ ಒಪ್ಪದಾಯಿತು. ಇದರ ಜತೆಗೆ ಮೂರ್ತಿಯೊಂದಿಗೆ ಕಣ್ಣಲ್ಲಿ ಕಣ್ಣಿಟ್ಟು ಮಣೀಂದ್ರನ ಚಿತ್ರಗಳನ್ನು ಅವರು ನೋಡಲಾರದಾದರು.

"ಏಕೆ ಮೂರ್ತಿ, ಅಪ್ಸರೆಯಲ್ಲಿ ಏನು ತಪ್ಪಿದೆ?"

"ಸರಿಯೇನಿದೆ ಮೊದಲು ಹೇಳಿ—ಅನಂತರ ನಾನು ತಪ್ಪುಗಳನ್ನು ತೋರಿಸಿ ಕೊಡುತ್ತೇನೆ."

"ಅರ್ಧಬತ್ತಲೆಯಾಗಿ ತೆಳ್ಳನೆಯ ವಸ್ತ್ರ ಧರಿಸಿ ಕೊಳದ ಅರೆ ಅರಳಿದ ಕಮಲವನ್ನು ನೋಡಿ ಅದರ ಮತ್ತು ತನ್ನ ರೂಪವನ್ನು ಕೊಳದಲ್ಲಿ ನೋಡಿಕೊಳ್ಳುತ್ತಾ ನಿಂತಿರುವ ಈ ಚಿತ್ರದ ಭಾವ ನನಗಂತೂ ಬಹಳ ಸುಂದರವೆನಿಸುತ್ತದೆ."

"ಸ್ತ್ರೀ ಅರೆಬೆತ್ತಲೆ ನಿಂತಿರುವಂತೆ ಚಿತ್ರಿಸಿದರೆ ಅದರಲ್ಲಿ ಸೌಂದರ್ಯ ವೇನು ಬಂತು? ಕಾಮವಿದೆಯೆನ್ನಿ ಒಪ್ಪುತ್ತೇನೆ."

"ನೀನು ಕಲೆಗೆ ಧರ್ಮದೃಷ್ಟಿಯನ್ನು ಮೂಡುತ್ತಿರುವೆ ಮೂರ್ತಿ. ಕಲೆ ಧರ್ಮಾತೀತವಾದದ್ದು, ನೀನು ಹೇಳುವ ಸಿದ್ಧಾಂತಗಳೆಲ್ಲವನ್ನು ಹಾಯ್ದು ಅದು ಬದುಕಿರುವುದು."

"ಅದನ್ನು ನಾನು ಒಪ್ಪಿದೆ ಮಾವಯ್ಯಾ, ಆನಂದವನ್ನು.... ಪರಿಶುದ್ಧವಾದ ಆನಂದವನ್ನು ಕೊಡುವುದೇ ಕಲೆಯ ಉದ್ದೇಶವಾದರೆ ಈ ಬಗೆಯ ಚಿತ್ರಗಳು ಆ ಆನಂದವನ್ನು ಒದಗಿಸುವವೇನು?"

"ನಿಸರ್ಗಕ್ಕೆ ಯಾವ ಕಲೆ ಸಮೀಪವಾಗಿರುತ್ತದೆಯೋ ಅದು ಆನಂದವನ್ನು ಒದಗಿಸಿಯೇ ಒದಗಿಸುತ್ತದೆ. ಸ್ತ್ರೀಯ ನಗ್ನತೆ ನೀನು ಹೇಳುತ್ತಿರುವಂತೆ ಮಹಾ ಹೇಸಿಗೆಯ ವಸ್ತುವಾಗಿದ್ದರೆ ಷೋಡಶಕಲಾ ಮಯನಾದ ಈಶ್ವರ ಅದನ್ನೇತಕ್ಕೆ ಸೃಷ್ಟಿಸುತ್ತಿದ್ದ?"

"ಅದೇ ಈಶ್ವರ ಸ್ತ್ರೀ ವಸ್ತ್ರ ಧರಿಸಬೇಕೆಂದು ಏತಕ್ಕೆ ನಿಯಾಮಕ ಮಾಡಿದ? ನಗ್ನ ಸಂಪ್ರದಾಯವೇ ಜಗತ್ತಿನಲ್ಲಿ ಹರಡಿ ಎಲ್ಲರೂ ನಗ್ನರಾಗಿರ ಬಾರದೇತಕ್ಕೆ?"

"ಈಗ ವಿದೇಶಗಳಲ್ಲಿ ಆ ಸಂಪ್ರದಾಯ ಬೆಳೆಯುತ್ತ ಇದೆಯಲ್ಲಾ."

"ನಮ್ಮಲ್ಲಿ ಬೆಳೆಯುವ ತನಕ ನಾವು ಕೈಹಾಕದಿರುವುದು ಲೇಸಲ್ಲವೆ? ಸ್ತ್ರೀಯನ್ನು ನಗ್ನಸ್ವರೂಪಿಸಲ್ಲಿ ತೋರಿಸುವುದಕ್ಕೂ ನಾನು ವಿರೋಧಿಸುವು ದಿಲ್ಲ. ಆದರೆ ಹಾಗೆ ತೋರಿಸುವ ದೃಷ್ಟಿಯ ಮೇಲೆ ಮಾತ್ರ ನನ್ನ ವಿರೋಧ ವಿದೆ. ಭಿಕ್ಷುಕಿ ತನ್ನ ಹಸಿವನ್ನೂ ತನ್ನ ಮಗುವಿನ ಆರ್ತರೋದನವನ್ನೂ ಅಡಗಿಸಲು ನಗ್ನಳಾಗಿ ನಿಂತು ತನ್ನ ದೇಹವನ್ನು ಮಾರಿಕೊಳ್ಳುವಂತೆ ಒಂದು ಚಿತ್ರವಿದೆಯೆನ್ನೋಣ. ಇಲ್ಲಿನ ನಗ್ನತೆಯ ಕಡೆಗೆ ಯಾರ ಗಮನವೂ ಬೀಳುವುದಿಲ್ಲ. ಭಿಕ್ಷುಕಿಯನ್ನು ಆ ಸ್ಥಿತಿಗಿಳಿಸಿದ ಸಮಾಜದ ಮೇಲೆ ಎಲ್ಲರ ಕಣ್ಣು ತಿರುಗುತ್ತದೆ. ಇಲ್ಲಿ ನಮ್ಮ ಕಣ್ಣಿಗೆ ಕಟ್ಟುವುದು ನಗ್ನಸ್ವರೂಪಿನಲ್ಲಿ ದೇಹದ ರೂಪಲಾವಣ್ಯವನ್ನು ಪ್ರದರ್ಶಿಸುವ ಬೆಲೆವೆಣ್ಣಿನ ಮನೋಭಾವ ವಲ್ಲ; ದೇಹವನ್ನು ಮುಚ್ಚಲು ಬಟ್ಟೆಯೂ, ಹಸಿವನ್ನು ಹಿಂಗಿಸಲು ಆಹಾರವೂ ಇಲ್ಲವೆಂದು ಕೂಗಿ—ಚೀರಿ—ಗೋಳಿಡುವ ತಾಯಿಯ ಅಂಡ ಲೆಯು ಚಿತ್ತಭಿತ್ತಿಯ ಮೇಲೆ ಮೂಡುತ್ತದೆ. ಸತ್ಯವನ್ನು ನಗ್ನಸ್ವರೂಪಿ ನಲ್ಲಿಯೇ ತೋರುತ್ತ ಹೋಗಬೇಕು. ಮಾನವನ ನೀಚವೃತ್ತಿಯ ಸೋಗು ಅದರ ಮೇಲೆ ಬೀಳುವುದು ಬೇಡ; ಆದರೆ 'ಅಪ್ಸರೆ'ಯಲ್ಲಿ ಕಾಣುವುದು ತಾಯ್ತನವನ್ನೂ ಬೆಲೆವೆಣ್ಣಿಗೆ ಇಳಿಸುವ ನೀಚ ಮನೋವೃತ್ತಿ."

"ನೀನು ಬಹಳ ಖಂಡಿತವಾದಿ ಮೂರ್ತಿ."

"ನೀವೇ ಯೋಚಿಸಿ ಮಾವಯ್ಯ. ಕಲೆಯ ಹೆಸರನ್ನು ಮುಂದು ಮಾಡಿಕೊಂಡು ನಮ್ಮ ಚಿತ್ತವಿಕಲ್ಪವನ್ನು ಅಜ್ಞರಾದ ಜನರ ಮೇಲೆ ಮೂಡುತ್ತ ಹೋಗುವುದು ಯಾವ ನ್ಯಾಯ? ಇಂದ್ರಿಯಗಳ ಲಾಲಸೆ

ಯನ್ನು ಕೆಣಕಲು ಕಲೆಯನ್ನು ಸಾಧನವಾಗಿ ಉಪಯೋಗಿಸಿಕೊಳ್ಳುವುದು ಯಾವ ಧರ್ಮ ?"

"ನಿಜ. ಆದರೆ ಸುಂದರವಾದುದನ್ನು ಇರುವಂತೆಯೇ ನೋಡಿ ಯಾವ ವಿಕಲ್ಪವನ್ನೂ ಪಡೆಯದೆ ಆನಂದಿಸಲು ಸಾಧ್ಯವಿಲ್ಲವೇ ?"

"ಸಾಧ್ಯವಿಲ್ಲೆಂದಲ್ಲ, ಎಲ್ಲರಿಗೂ ಸಾಧ್ಯವಿಲ್ಲ. ಮಧುರಬಾಬು ಭಗವಾನ್ ರಾಮಕೃಷ್ಣರ ವೈರಾಗ್ಯವನ್ನು ಪರೀಕ್ಷಿಸಲು ಅವರನ್ನು ನಗ್ನ ಸ್ತ್ರೀಯರಿದ್ದ ಒಂದು ಕೊಠಡಿಗೊಮ್ಮೆ ತಳ್ಳಿದನಂತೆ. ಅಲ್ಲಿ ಗುರುದೇವರು ಜಗನ್ಮಾತೆಯ ನಿಜಸ್ವರೂಪವನ್ನು ಕಂಡು ಸ್ಮೃತಿತಪ್ಪಿದರಂತೆ. ಅವರ ಸಂಸ್ಕೃತಿ ಹಾಗಿತ್ತು. ನಗ್ನೆಯರಾದ ಬೆಲೆವೆಣ್ಣುಗಳಲ್ಲಿ ಕೂಡ ಜಗನ್ಮಾತೆ ಯನ್ನು ಕಾಣುವ ಆತ್ಮತೇಜಸ್ಸು ಅವರಲ್ಲಿತ್ತು. ಆದರೆ ನಮಗೆ........ ಜಗನ್ಮಾತೆಯ ನಗ್ನತೆಯಲ್ಲಿಯೂ ನಮ್ಮ ಕಾಮಲಾಲಸೆಯ ಪ್ರತಿಬಿಂಬ ಕಾಣಬರುತ್ತದೆ. ಸಂಸ್ಕೃತಿಯ ಅಂತಹ ಉಚ್ಚ ಪದವಿಯನ್ನು ಎಲ್ಲರೂ ಏರುವುದಕ್ಕಾಗುವದಿಲ್ಲವೆಂದು ಅರಿತೂ ಅರಿತೂ 'ಅಪ್ಸರೆ'ಯಂತಹ ಚಿತ್ರಗಳನ್ನು ಬರೆಯುವದರ ಅರ್ಥವೇನು ? ಕೆಟ್ಟ ಅಭಿರುಚಿಯನ್ನು ಕಲಾವಿದ ತನ್ನ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುವುದೇ ಅಲ್ಲವೇ ?"

"ಮಣೀಂದ್ರನ ಮೇಲೂ ಈ ಆಪಾದನೆ ಮಾಡುವೆಯಾ ?"

"ಮಾಡುವೆ. ಆದರೆ ಅತ್ಯಂತ ವಿಷಾದದಿಂದ ಆಪಾದನೆ ಮಾಡುವೆ. ಉತ್ತಮ ರಸಋಷಿಯಾಗುವ ಸೂಚನೆ ತೋರುತ್ತಿದ್ದ ಮಣೀಂದ್ರ ಅಡ್ಡದಾರಿ ಹಿಡಿದನಲ್ಲಾ ಎಂಬ ವ್ಯಥೆಯಿಂದ ಅವನ ಕೃತಿಗಳನ್ನು ಖಂಡಿಸುವೆ."

"ಹಾಗಾದರೆ........'ಅಪ್ಸರೆ'ಯನ್ನು 'ಆನಂದ'ಕ್ಕೆ ತರಿಸುವುದು ಬೇಡ ವೇನು ?"

"ನಿಮ್ಮ ಓದುಗರನ್ನು ಕೇಳಿ."

"ಅವರ ಅಭಿಪ್ರಾಯವಿರಲಿ. ನಿನ್ನದು ಹೇಳಪ್ಪಾ."

"ನನ್ನದು ಹೇಳಿಯೇ ಇದ್ದೇನಲ್ಲಾ."

"ತಥಾಸ್ತು" ಎಂದರು. 'ಆನಂದ'ನಿಗೂ 'ಮಧುಕರ'ನಿಗೂ ಉಂಟಾಗಿದ್ದ ಮಧುರಬಾಂಧವ್ಯಕ್ಕೆ ಅಪ್ಸರೆ ಅಡ್ಡಬಂದ

ಹಾಗಾಯಿತು ಎಂದು ರಾಯರು ನಗೆಯಾಡುತ್ತ ಮೂರ್ತಿಯನ್ನು ಎಳೆದೊಯ್ದರು.

೧೮

'ಮಧುಕರ' ದೊಂದಿಗೆ ಆರಂಭವಾದ ಸಂಬಂಧ ಅವಿಚ್ಛಿನ್ನವಾಗಿ ಒಂದು ವರ್ಷಕಾಲ ನಡೆದು ಬಂತು. ಉಚ್ಚಕಲೆಯ ಗುಪ್ತಮಾರ್ಗಗಳ ಸಂಕಷ್ಟಗಳಿಲ್ಲದಂತಹ ಒಂದು ಸುಗಮಮಾರ್ಗ ಈ ಸಂಬಂಧದಿಂದ ಅವನಿಗೆ ಗೊತ್ತಾಗಿತ್ತು. ಜನತೆಯ ಅಭಿರುಚಿಯೆಂತಹುದು? ಆ ಅಭಿರುಚಿಗೆ ಸೊಪ್ಪುಹಾಕುತ್ತ ಹೋಗುವುದರ ಲಾಭವೇನು? ಎಂಬುದು ಮಾಣಿಗೆ ಚೆನ್ನಾಗಿ ಅನುಭವಕ್ಕೆ ಬಂದಿತ್ತು. ಆದರೂ ಪೂರ್ವಜನ್ಮದ ಸ್ಮೃತಿ ಒಮ್ಮೊಮ್ಮೆ ಬಂದು ಅವನ ಬಾಳಿನ ಸವಿಯನ್ನು ಕದಡಿ ಬಿಡುತ್ತಿತ್ತು.

'ಉತ್ತಮ ಅಂತಃಕರಣ, ಉತ್ತಮ ಜೀವನ, ಎರಡನ್ನೂ ಹೊಂದುವ ಶಕ್ತಿ ನಿನಗೆ ದೊರೆಯಲಿ' ಎಂಬ ಮೂರ್ತಿಯ ಹರಕೆ,

'ನೀನು ಹುಟ್ಟ ಕಲಾವಿದ' ಎಂಬ ನಂದಾಲಾಲರ ನುಡಿ,

'ಶ್ಯಾಮಸುಂದರ ಚಿತ್ರವನ್ನು ಬರೆಯುವ ಯೋಗ್ಯತೆ ಕೆಟ್ಟ ಬಾಳಿನಿಂದ ಕುಂದಬಾರದು.....ನೀವು ದೊಡ್ಡವರಾಗಿ ಇಂತಹದೇ ಅನೇಕ ಉತ್ತಮ ಕೃತಿಗಳನ್ನು ಮಾಡಬೇಕು' ಎಂದು ರೂಪಳಿತ್ತಿದ್ದ ಸಂದೇಶ ಆಗಾಗ್ಗೆ ಮಾಣಿಯ ತೃಪ್ತಿಯನ್ನೂ ಶಾಂತಿಯನ್ನೂ ಭಂಗಗೊಳಿಸುತಿದ್ದವು. ಜೀವನಸುಖದ ಅಮಲಿನ ಮಹಿಮೆಯನ್ನೊಮ್ಮೆ ಕಂಡಿದ್ದುದರಿಂದ ಅದನ್ನು ಬಿಟ್ಟು ಕಾಣದ—ಪ್ರಾಯಶಃ ಇಲ್ಲದೇ ಇರುವ—ಯಾವದೋ ಆದರ್ಶದ ರಣಕಂಬಕ್ಕೆ ನೇಣುಬಿಗಿದುಕೊಳ್ಳಲು ಅವನ ಮನಸ್ಸೊಪ್ಪದು. 'ಇರುವ ತನಕ ಸುಖವಾಗಿದ್ದು ಬಿಡಬೇಕು. ಜೀವನ ಯಾವ ಯಾವ ಮಾರ್ಗದಲ್ಲಿ ಸುಖವನ್ನೊದಗಿಸುವುದೋ ಅದನ್ನು ಸಂಪೂರ್ಣವಾಗ ಭೋಗಿಸಿ ಬಿಡಬೇಕು' ಎಂದಂದುಕೊಳ್ಳುವನು. 'ಮರುಕ್ಷಣವೇ 'ಅಲ್ಪಸ್ವಲ್ಪ ಸುಖದಲ್ಲಿ ಮೈಮರೆತು ಶಾಶ್ವತ ಕೀರ್ತಿಗಳಿಸುವುದನ್ನು ನಿರ್ಲಕ್ಷಿಸುವುದೇ?' ಎಂದು ಯೋಚನೆ ಬರುವುದು. 'ಕೀರ್ತಿಗಳಿಸಿದವರೆಲ್ಲರನ್ನೂ ನೆನೆಯುವವರು

ಯಾರು? ಎಲ್ಲರಿಗೂ ಅವರವರ ಚಿಂತೆ. ಇರುವ ತನಕ ಸುಖವಾಗಿದ್ದು ಬಿಡುವುದೇ ಉತ್ತಮ ಮಾರ್ಗ, ಎಂದು ನಿರ್ಧರಿಸಿಕೊಂಡ.

ನೀಲನಿಂದ ತಪ್ಪದೆ ಪತ್ರಗಳು ಬರುತ್ತಿದ್ದರೂ ಆಲಸ್ಯದಿಂದ ಮಾಣಿ ಅವುಗಳಿಗೆ ಮನಸ್ಸು ಬಂದಾಗ ಮಾರುತ್ತರ ಬರೆಯುತ್ತಿದ್ದ. ಕೆಲವು ಸಲ ಒಂದೆರಡು ತಿಂಗಳಾದರೂ ಮಾರುತ್ತರ ಬರೆಯುತ್ತಿರಲಿಲ್ಲ. 'ವ್ಯವಧಾನವಿಲ್ಲ. ಕಾರ್ಯಭಾರ. ಸರಿಯಾಗಿ ಉಸಿರಾಡಲೂ ಪುರುಸೊತ್ತಿಲ್ಲ' ಎಂಬುದೇ ಅದಕ್ಕೆ ಸಮಾಧಾನ.

ಆದರೆ ಯಾವುದರಿಂದ ತಾನು ತೃಪ್ತಿಯನ್ನೂ ಸಂತೋಷವನ್ನೂ ಬಯಸಹೋದನೋ ಅದರಿಂದ ಅವು ದೊರೆಯದಾಗಲು ವಿಷಾದಗೊಂಡ. ಚಿತ್ರಗಳ ಮಾರಟ ಚೆನ್ನಾಗಿತ್ತು. 'ಮಧುಕರ'ದ ಮೂಲಕವೂ ಬೇಕಾದಷ್ಟು ಹಣ ಬರುತ್ತಿದ್ದಿತು. ಅವುಗಳನ್ನು ಅನೇಕಮಂದಿ ಹಾಡಿ ಹೊಗಳುತ್ತಲೂ ಇದ್ದರು ಆದರೆ ತೃಪ್ತಿ ಮಾತ್ರ ದೊರೆಯಲಿಲ್ಲ; ಹಣ ಬಂದಷ್ಟೂ ಹಣದ ದಾಹ ತಪ್ಪಲಿಲ್ಲ; ಕಾಮಿನಿಯರು ದೊರೆತಷ್ಟು ಕಾಮದಾಹ ಅಣಗಲಿಲ್ಲ; ಕೀರ್ತಿಕೂಡಿದಷ್ಟೂ ಕೀರ್ತಿದಾಹ ಹಿಂಗಲಿಲ್ಲ. ಈ ದಾಹಗಳ ಬೇಗೆಯಲ್ಲಿ ಮಾಣಿಯ ಅಂದಿನ ಕಲೆ ಕೂಡ ಕಂಗೆಡುತ್ತ ಬಂದಿತು.

ಅನೇಕ ದಿನಸಗಳವರೆಗೆ 'ಮಧುಕರ'ದ ಅಧಿಕಾರವರ್ಗಕ್ಕೆ ಮಾಣಿಯ ದರ್ಶನಕೂಡ ದೊರೆಯುತ್ತಿರಲಿಲ್ಲ. ಅವನು ಅವರನ್ನನುಸರಿಸುವುದು ಹೋಗಿ ಅವರು ಅವನನ್ನು ಅನುಸರಿಸುವಂತಾಯಿತು. ಅವರು ನಿರೀಕ್ಷಿಸಿದ ಚಿತ್ರಗಳು ಸಕಾಲಕ್ಕೆ ಸಿದ್ಧವಾಗುತ್ತಿರಲಿಲ್ಲ. ಒಂದೆರಡು ಸಲ ದಯಾಮಯರಾದ ಸಂಪಾದಕರು ಎಚ್ಚರಿಕೆಯನ್ನೂ ಕೊಟ್ಟರು. ಈ ನಿರಂಕುಶಪ್ರಭುತ್ವ ಬಹಳಕಾಲ ನಡೆಯಲಾರದೆಂದೂ ಸಂಪಾದಕ ಮಂಡಳಿಯಲ್ಲಾಗಲೇ ಮಾಣಿಯ ಬಗ್ಗೆ ಭಿನ್ನಾಭಿಪ್ರಾಯಗಳು ಹುಟ್ಟಿವೆಯೆಂದೂ ಸೂಚಿಸಿದರು. ಮಾಣಿ ಇವೆಲ್ಲಾ ಗೊಡ್ಡು ಬೆದರಿಕೆಯ ಮಾತುಗಳೆಂದು ಸಂಪಾದಕರ ಹಿತೋಕ್ತಿಗಳನ್ನು ತಾತ್ಸಾರದಿಂದ ಕಾಣುತ್ತಾ ಬಂದ.

ಊಹಾ ಚಿತ್ರಗಳಲ್ಲಿದ್ದ ಅನುರಕ್ತಿ ಮಾಣಿಗೆ ಕ್ರಮೇಣ ಕಡಿಮೆಯಾಗುತ್ತ ಬಂದಿತು. ಶ್ರಮಕ್ಕೆ ತಕ್ಕ ಪ್ರತಿಫಲ ಅವರಲಿಲ್ಲವೆಂದು ಮನ

ಗಂಡ. ಬಣ್ಣಗಳ ನಿಯೋಜನೆಯಲ್ಲಿ ತನಗಿದ್ದ ಸ್ವಾಮ್ಯವನ್ನು ಸಂಪೂರ್ಣ ವಾಗಿ 'ಭಾವಚಿತ್ರ' (Portraits) ಗಳ ರಚನೆಯಲ್ಲಿ ಉಪಯೋಗಿಸ ಬೇಕೆಂದು ನಿಷ್ಕರ್ಷಿಸಿದ್ದ.

ಹ್ಯಾರಿಸನ್ ಬೀದಿಯಲ್ಲಿದ್ದ ಭವ್ಯವಾದ ಒಂದು ಸೌಧದ ಮಹಡಿ ಬಾಡಿಗೆಗೆ ದೊರಕಿತು. ಚಿತ್ತರಂಜನ ವೃಕ್ಷಶ್ರೇಣಿ ಸಮೀಪವಿದ್ದುದೊಂದ ಅನುಕೂಲವಾಯಿತು. ಆ ಮಹಡಿಯನ್ನು ತೆಗೆದುಕೊಂಡು ತನ್ನ 'ಕಲಾಶಾಲೆ' ಯನ್ನು ಮಾಣಿ ಆರಂಭಿಸಿದ. ಮಾದರಿಗಾಗಿ ಅಲ್ಲಿನ ಗೋಡೆಗಳ ಮೇಲೆ ತನ್ನ ಚಿತ್ರಗಳನ್ನಲಂಕರಿಸಿ ಹೊಸ ಹುರುಪಿನಿಂದ ತನ್ನ ನೂತನ ಜೀವನಕ್ಕೆ ಕಾಲಿಟ್ಟ.

ಕಲಾಶಾಲೆಯ ಪಕ್ಕದಲ್ಲಿ ಒಂದು ಸಣ್ಣ ಕೋಣೆ. ಅದನ್ನು ಆರಾಮ ಮಂದಿರವಾಗಿ ಉಪಯೋಗಿಸಲಾರಂಭಿಸಿದ. ಮಂಚದ ಎದುರಿಗೆ ಎರಡು ಚಿತ್ರಗಳು—'ಶ್ಯಾಮಸುಂದರ' ಮತ್ತು ರೂಪಳ ಭಾವಚಿತ್ರ ಕಂಗೊಳಿಸುತ್ತಿ ದ್ದವು. ಮನ ಬೇಸರಗೊಂಡಾಗ ರೂಪಳ ಚಿತ್ರವನ್ನು ನೋಡುತ್ತಾ ವಿಶ್ರಾಂತಿ ಪಡೆಯುತ್ತಿದ.

'ಮಧುಕರ'ದಿಂದ ಗೊತ್ತಾದ ವರಮಾನವಿದ್ದುದರಿಂದ ಮಾಣಿಯ 'ಕಲಾಶಾಲೆ' ಬಾಲ್ಯಾರಿಷ್ಟಗಳನ್ನು ಸುಲಭವಾಗಿ ಕಳೆಯಲಾರಂಭಿ ಸಿತು. ಮೊದಮೊದಲು ತನ್ನ ಕಲೆ ಯಾರಿಗೂ ಬೇಡವೋ ಎಂದು ಪ್ರಶ್ನಿಸಿಕೊಳ್ಳುವಂತಾಯಿತು. ತನ್ನಿಂದ 'ಭಾವಚಿತ್ರ' ಗಳನ್ನು ಮಾಡಿಸಿ ಕೊಳ್ಳುವ ಗಿರಾಕಿಗಳಿಗೆ ಅಲೆದಲೆದು ಮಾಣಿಗೆ ಸಾಕಾಗಿಹೋಯಿತು. ಎಂಟು ಹತ್ತು ರೂಪಾಯಿಗಳಲ್ಲಿ ಯಂತ್ರಕಲೆಯ (Photography) ಭಾವಚಿತ್ರ ದೊರೆಯುವಾಗ ಎಂಭತ್ತು, ನೂರು ರೂಪಾಯಿಗಳನ್ನಿತ್ತು ಮಾಣಿಯ ಕೃತಿಗಳನ್ನು ಕೊಳ್ಳಲು ಯಾರು ಒಪ್ಪುತ್ತಾರೆ? 'ಒಂದೆರಡು ಮಾದರಿಯ ಭಾವಚಿತ್ರಗಳನ್ನು ಮಾಡಿಕೊಂಡು ಕೆಲವುಮಂದಿ ಶ್ರೀಮಂತ ರಿಗೂ ವರ್ತಕರಿಗೂ ತೋರಿಸಿದರೆ ಗಿರಾಕಿಗಳು ದೊರೆಯಬಹುದು' ಎಂದು ತನ್ನ ಯೋಚನೆಗೆ ತಕ್ಕ ಭಾವರೂಪ ಸಂಪತ್ತಿಯುಳ್ಳ ಸ್ತ್ರೀಯರನ್ನು ಹುಡುಕಲಾರಂಭಿಸಿದ.

ಒಂದು ದಿನ ಚಿತ್ತರಂಜನ ಹಾದಿಯಲ್ಲಿ ಹೋಗುತ್ತಿದ್ದಾಗ ಎದುರಿಗೆ

ಒಬ್ಬ ವೈಷ್ಣವ ಬಾಲಿಕೆ ತನ್ನ ಚಿಕ್ಕ ತಮ್ಮನೊಂದಿಗೆ ಭಿಕ್ಷೆ ಬೇಡುತ್ತಿರುವುದನ್ನು ಕಂಡ. ಹುಡುಗಿಯ ಮೈಕಟ್ಟು, ವಿಶಾಲವಾದ ಭಾವಪೂರ್ಣವಾದ ನೇತ್ರಗಳು, ದೀರ್ಘವಾದ ಕೇಶರಾಶಿ ಮಾಣಿಯ ಗಮನವನ್ನು ಸೆಳೆದವು. ಪಕ್ಕದಲ್ಲಿದ್ದ ಉಪವನಕ್ಕೆ ಬಾಲಿಕೆ ಭಿಕ್ಷೆ ಬೇಡಲಿಕ್ಕೆ ಹೋದುದನ್ನು ಕಂಡು, ತಾನೊಂದು ಕಡೆಯಿಂದ ಉಪವನವನ್ನು ಪ್ರವೇಶಿಸಿ ಹುಲ್ಲು ನೆಲದ ಮೇಲೆ ಏನನ್ನೊ ಯೋಚಿಸುತ್ತಿರುವಂತೆ ಚಿಗುರನ್ನು ರುಚಿ ನೋಡುತ್ತಾ ಕುಳಿತ. ಬಾಲಿಕೆ ವೈಷ್ಣವಗೀತವನ್ನು ಹಾಡಿಕೊಂಡು ಮಾಣಿ ಕುಳಿತಿರುವಲ್ಲಿ ಬಂದು

"ಭಿಕ್ಷೆ ನೀಡಿ ಮಹಾಶಯ. ನಾವು ಬಹಳ ಬಡವರು."

"ಅ...." ಎಂದು ನಿದ್ರೆಯಿಂದೆದ್ದವನಂತೆ ಬಾಲಿಕೆಯ ಕಡೆ ನೋಡಿ ಕಿಸೆಯಿಂದ ನಾಲ್ಕಾಣೆಯ ನಾಣ್ಯವೊಂದನ್ನು ತೆಗೆದು ಎಸೆದ. ಮೂರು ಕಾಸು ಕೊಡುವುದೇ ಕಷ್ಟವಾಗಿರುವ ಕಾಲದಲ್ಲಿ ಸುಲಭವಾಗಿ ನಾಲ್ಕಾಣೆ ನಾಣ್ಯ ದೊರೆತುದು ಬಾಲಿಕೆಗೆ ಅತ್ಯಾಶ್ಚರ್ಯವನ್ನುಂಟುಮಾಡಿತು. ಹಿಗ್ಗುತ್ತ ತನ್ನ ತಮ್ಮನಿಗೂ ಹೇಳಿಕೊಟ್ಟು ಮಾಣಿಗೆ ಮತ್ತೆ ಮತ್ತೆ ಕೃತಜ್ಞತೆಯಿಂದ ವಂದಿಸಿದಳು. ಮಾಣಿ ಅವಳನ್ನು ದಿಟ್ಟಿಸಿ ನೋಡುತ್ತ

"ವೈಷ್ಣವೀ....ನಿನ್ನ ಹೆಸರೇನು ?"

"ಚಾರುಬಾಲಾ, ಮಹಾಶಯ ;"

"ಈ ಹುಡುಗ ನಿನ್ನ ತಮ್ಮನೋ ?"

"ಹೌದು ಮಹಾಶಯ."

"ಅವನ ವಯಸ್ಸೆಷ್ಟು ?"

"ಎಂಟು."

"ನಿನ್ನ ವಯಸ್ಸು."

"ಹತ್ತೊಂಬತ್ತು ಮಹಾಶಯ."

"ನೀವು ಬಹಳ ಬಡವರೋ ?"

"ಹೌದು ಮಹಾಶಯ, ಮನೆಯಲ್ಲಿ ನಮ್ಮ ತಾಯಿ, ಅಜ್ಜಿ, ಒಂದು ಚಿಕ್ಕ ಮಗು ಬೇರೆ ಇವೆ. ನಮ್ಮ ತಾಯಿ ಕುರುಡಿ. ತಂದೆ ಕೆಲವು ದಿವಸಗಳ ಹಿಂದೆ ತೀರಿಕೊಂಡರು."

"ಹಾಗಾದರೆ ನೀನು ಸಂಪಾದಿಸಿ ಅವರ ಹೊಟ್ಟೆಬಟ್ಟೆಯನ್ನು ನೋಡಬೇಕೇನು ?"

"ಹೌದು ಮಹಾಶಯ, ಬಹಳ ಕಷ್ಟದ ಬಾಳು."

"ಚಾರು, ದಿವಸಕ್ಕೆಷ್ಟು ಸಂಪಾದಿಸುತ್ತೀ ?"

"ಬಂದ ದಿವಸ ನಾಲ್ಕೈದು ಆಣೆಗಳು ಬರುತ್ತವೆ. ಕೆಲವು ದಿವಸ ಒಂದಾಣೆಯ ಕಾಸೂ ಸಿಗುವುದಿಲ್ಲ ಮಹಾಶಯ."

"ಹಾಗಾದರೆ....ದಿವಸಕ್ಕೆ ಎಂಟು ಆಣೆಯಂತೆ ಕೊಡುವೆ. ನನಗಾಗಿ ದುಡಿಯುವೆಯೇನು ?"

"ಅದು ಏನು ಕೆಲಸ ಮಹಾಶಯ ?"

"ನನ್ನ ಯೋಗಕ್ಷೇಮ ನೋಡಿಕೊಳ್ಳಬೇಕು........ನನ್ನ ಕಲಾಶಾಲೆಯನ್ನು ಚೊಕ್ಕಟವಾಗಿಟ್ಟಿರಬೇಕು........ಏನು ! ಒಪ್ಪುವೆಯೋ ?"

"ತಾವು ಚಿತ್ರಕಾರರೇ ಮಹಾಶಯ."

"ಅಹುದು."

ಚಾರು ಕ್ಷಣಕಾಲ ಯೋಚಿಸಿ ಸಂತೋಷದಿಂದ ಒಪ್ಪಿದಳು. ಮಾಣಿ ಅವಳನ್ನು ಕರೆದೊಯ್ದು ತನ್ನ ಕಲಾಶಾಲೆಯನ್ನು ತೋರಿಸಿ 'ನಾಳೆಯಿಂದ ಕೆಲಸಕ್ಕೆ ಬಂದು ಬಿಡು' ಎಂದು ಆಜ್ಞಾಪಿಸಿ, ಮಾರನೆಯ ದಿವಸದ ಚಿತ್ರಕೆಲಸಕ್ಕೆ ಬೇಕಾಗುವ ಬಣ್ಣ, ಕುಂಚ, ಕಾಗದಗಳನ್ನು ತರಲು ಅಂಗಡಿಯ ಕಡೆ ಹೋದ.

* * * *

"ಆಯಾಸವಾಯಿತೇ ಚಾರು ?"

"ಇಲ್ಲ ಮಹಾಶಯ. ನಿಮಗೆ ಆಯಾಸವಾಗಿರಬಹುದು."

"ನನಗೆ ಆಯಾಸವೆಂಬುದೇ ಇಲ್ಲ ಚಾರು."

"ಇದು ಇನ್ನೆಷ್ಟು ದಿವಸವಾಗುತ್ತದೆ ಮಹಾಶಯ ?"

"ನಾಳೆ ನಾಡಿದ್ದರಲ್ಲಿ ಮುಗಿಯಬಹುದು. ನಿನಗೆ ಸ್ವಲ್ಪ ಟೀ ಕೊಡಲೇ ?"

"ಬೇಡ ಮಹಾಶಯ. ಇವೂ ಕೂಡಿ ಮೂರು ಆಯಿತಲ್ಲವೇ— ನನಗೆ ಒಂದನ್ನೂ ತೋರಿಸಿಯೇ ಇಲ್ಲವಲ್ಲಾ ಮಹಾಶಯ."

"ಅವುಗಳನ್ನು ನೀನು ನೋಡದೆ ಇನ್ನು ಯಾರು ನೋಡಬೇಕು ಚಾರು ?........ಸರಿಯಾಗಿ ಕುಳಿತುಕೋ—ಸ್ವಲ್ಪ ಕುತ್ತಿಗೆಯೆತ್ತು."

ಮತ್ತೆ ಸ್ವಲ್ಪ ಹೊತ್ತು ಚಿತ್ರಗೆಲಸ ಸಾಗಿತು.

"ಕುತ್ತಿಗೆ ಬಹಳ ನೋಯುತ್ತಿದೆ ಮಹಾಶಯ."

"ಆಗಲಿ. ಸ್ವಲ್ಪ ವಿಶ್ರಾಂತಿ ಹೊಂದು—ನಾನು ಒಂದು ಸಿಗರೇಟನ್ನು ಎಳೆಯುವ ತನಕ........" ಎಂದು ಸಿಗರೇಟನ್ನು ಹಚ್ಚಿ ಬೇರೆ ಬೇರೆ ಮೂಲೆಗಳಿಂದ ಚಿತ್ರದ ಸೌಂದರ್ಯವನ್ನು ಪರೀಕ್ಷಿಸತೊಡಗಿದ.

"ನನ್ನದೇ ಇಷ್ಟೊಂದು ಚಿತ್ರಗಳನ್ನು ಮಾಡಿ ಏನು ಮಾಡುವಿರಿ ಮಹಾಶಯ."

"ಇಟ್ಟುಕೊಳ್ಳುವೆ ಚಾರು ನಿನಗೊಂದು ಬೇಕೇನು ?"

"ತಾವು ಕೊಟ್ಟರೆ ಬೇಡವೆನ್ನುತ್ತೇನೆಯೇ ? ಆದರೆ ನಮ್ಮ ಗುಡಿಸಲು ಅದಕ್ಕೆ ಸರಿಯಾದ ಜಾಗವಲ್ಲನಲ್ಲಾ ಎಂದು ಯೋಚಿಸುತ್ತಿದ್ದೇನೆ. ಒಂದು ಸಲ ಮಳೆ ಹೊಡೆದರೆ ಒಳಗೆಲ್ಲಾ ತೆಪ್ಪೋತ್ಸವವಾಗುತ್ತದೆ."

"ನನ್ನ ಸಿಗರೇಟು ಮುಗಿಯುತ್ತ ಬಂತು. ಇನ್ನು ಕುಳಿತುಕೊಳ್ಳುವೆಯೋ ?"

"ಆಗಲಿ ಮಹಾಶಯ."

"ಈ ಚಿತ್ರದ ಹೆಸರೇನು ಗೊತ್ತೇ ಚಾರು ?"

"ಹೇಳಿ."

"ವಸಂತ – ಮೋಹಿನಿಯೆಂದು."

"ನಾನು ವಸಂತಮೋಹಿನಿಯೇ ?"

"ನೀನಲ್ಲ........ನಿನ್ನ ಚಿತ್ರ. ಇದು ಮುಗಿಯಲಿ ತಡೆ; ನೋಡುವೆಯಂತೆ."

ಅಂದಿನ ಕೆಲಸ ಮುಗಿಯುವ ವೇಳೆಗೆ ಚಾರುವಿನ ಕುತ್ತಿಗೆ ಫಾಲ್ಗುಣದಲ್ಲಿ ಕೂಡಿಸುವ ಕಾಮನ ಬೊಂಬೆಯ ಕುತ್ತಿಗೆಯಂತಾಗಿತ್ತು. ಕುತ್ತಿಗೆಯ ನೋವನ್ನು ಕಡಿಮೆ ಮಾಡಿಕೊಳ್ಳುವುದಕ್ಕೆ ಅವಳು ಪಡುತ್ತಿದ್ದ ಶ್ರಮವನ್ನು ನೋಡಿ ಮಾಣಿ ಕುತ್ತಿಗೆಯನ್ನು ನೇವರಿಸಿ ನೀವಿದ. ಆ ಮೃದುವಾದ – ಹೊಸದಾದ – ಜೀವನದ ಹೊಡೆತ ಇರಿತಗಳಿಗೆ ಸಿಕ್ಕದ

ಹೊಸ ದೇಹ. ಮಾಣಿಯ ಮೈ ಪುಳುಕಿತವಾಯಿತು. ಅವಳ ಕುತ್ತಿಗೆಯನ್ನು ನೇವರಿಸುತ್ತಾ ಹಾಗೆಯೇ ಕೈಹಾಕಿ ಅಪ್ಪಿ ಚುಂಬಿಸಿ ಬಿಟ್ಟ.

"ಮಹಾಶಯ....ಮಹಾಶಯ....ಮಹಾಶಯ" ಎಂದು ಹೇಳುತ್ತ ಹೇಳುತ್ತ 'ಒಲ್ಲೆ'ನೆನ್ನುವ ಸೊಲ್ಲು ಅವಳ ದನಿಯಲ್ಲಿ ಅಡಗುತ್ತ ಬಂತು. ತಾರುಣ್ಯದ ಸೆಳೆಮಿಂಚು ಅವಳ ದೇಹದಲ್ಲಿ ಸುಳಿಯಿತು. ಮರುಕ್ಷಣವೇ ಏನು ಯೋಚನೆ ಬಂದಿತೋ ಮಾಣಿಯ ಕೈಕೊಡಹಿ ಕೆಣಕಿದ ಫಣಿಯಂತೆ ಒಂದು ಪಕ್ಕಕ್ಕೆ ಬಂದು ನಿಂತಳು. ಮಾಣಿ ಅವಳನ್ನು ದಿಟ್ಟಿಸಿ ನೋಡುತ್ತ

"ಹೇಳು ಚಾರು......."

"ಮಹಾಶಯ. ನೀವು....ನೀವು ಹೀಗೆ ಮಾಡಬಾರದಿತ್ತು. ನಾಳೆಯಿಂದ ನಾನು ಬರುವುದಿಲ್ಲ.

"ಹಾಗಾದರೆ ತಾಯಿ ತಂಗಿಯರಿಗೆ ತಿನ್ನಲು ಮಣ್ಣು ಕೊಡುವಿಯೇನು ?"

"ಕೃಪೆಮಾಡಿ ಮಹಾಶಯ" ಎಂದು ಅವಳು ಮುಗಿಸುವಷ್ಟರಲ್ಲಿ ಮಾಣಿಯ ತೋಳಸೆರೆಯಲ್ಲಿ ಬಂದಿಯಾಗಿದ್ದಳು.

* * * *

ಮೂರು ನಾಲ್ಕು ತಿಂಗಳು ಕಳೆಯುವುದರೊಳಗೆ 'ಭಾವಚಿತ್ರ ಲೇಖನ ಕಲಾಪುಣ' ಮಣಿಂದ್ರನ ಖ್ಯಾತಿ ಎಲ್ಲೆಲ್ಲಿಯೂ ಹಬ್ಬುತ್ತ ಬಂತು, ಮಣೀಂದ್ರನ ಕೈಯಲ್ಲಿ ತಮ್ಮ 'ಭಾವಚಿತ್ರ'ವನ್ನು ಮಾಡಿಸಿಕೊಳ್ಳುವುದು ದೊಡ್ಡಸ್ತಿಕೆಯ ಗುರುತಾಗುತ್ತಾ ಬಂದಿತು. ಶ್ರೀಮಂತರು ತಮ್ಮ ಚಿತ್ರಗಳನ್ನು ಮಾಡಿಸಿಕೊಳ್ಳುವುದಕ್ಕಿಂತಲೂ ಹೆಚ್ಚಿನ ಆದರದಿಂದ ತಮ್ಮ 'ಪ್ರಿಯಜನ'ರ ಚಿತ್ರಗಳನ್ನು ಮಾಡಿಸಿಕೊಳ್ಳುತ್ತಾ ಬಂದರು. ಕೀರ್ತಿ ಸಿರಿ ಲಕ್ಷ್ಮಿಯರಿಬ್ಬರೂ ಮಾಣಿಯ ಮನೆಯೊಳಗಕ್ಕೆ ನಿಂತಂತಾಯಿತು.

ಮನೆಯ ಜೀವನರೀತಿ ಬದಲಾಯಿಸುತ್ತ ಬಂದಿತು. ಅದೇ ಕಟ್ಟಡದ ಮಹಡಿಯ ಕೊಟಡಿಗಳೆಲ್ಲವನ್ನೂ ತಾನೇ ಬಾಡಿಗೆಗೆ ತೆಗೆದುಕೊಂಡು ಅಂದವಾಗಿ ಅಲಂಕರಿಸಿಕೊಂಡು ಶ್ರೀಮಂತರನ್ನು ನಾಚಿಸುವ ಜೀವನವನ್ನು ನಡೆಸುತ್ತಾ ಬಂದ. ನೆಲಕ್ಕೆ ಪರ್ಶಿಯಾದ ರತ್ನ ಕಂಬಳಿಗಳು; ಗೋಡೆಗೆ

ಕಾಶಿಯ ಪೀತಾಂಬರಗಳು; ಮೂಲೆಯ ಅಲಂಕಾರಕ್ಕೆ ಮೈಸೂರಿನ ಗಂಧದ ದಂತದ ಸಾಮಾನುಗಳು. ಅಲ್ಲಲ್ಲಿ ಜಯಪುರ, ಬೀದರ್‌ಗಳ ಕಂಚಿನ ಕೆತ್ತನೆಯ ಸಾಮಾನುಗಳು. ಕಲಾವಿದನ ಸೌಧ ಕಲಾಸೌಧವಾಗಿ ಪರಿಣಮಿಸಿತ್ತು.

ಮಾಣಿಯ ಶ್ರೀಮಂತ ಜೀವನವನ್ನು ನೋಡುತ್ತಾ ಒಮ್ಮೊಮ್ಮೆ, ಚಾರುಬಾಲಾ ಭಯಗ್ರಸ್ತಳಾಗುವಳು. ಅವನನ್ನು ನೋಡಬರುವ ಶ್ರೀಮಂತರ ನಡೆನುಡಿಗಳನ್ನು, ಅವನ ಗೆಳತಿಯರ ವಿಲಾಸವೈಭವಗಳನ್ನೂ ನೋಡಿ 'ತಾನೇಕೆ ಇಲ್ಲಿಗೆ ಬಂದೆ?' ಎಂದು ಅಂದುಕೊಳ್ಳುವಳು. ಆದರೆ ಅವನ ಮನೆಯಲ್ಲಿ ತನಗಿದ್ದ ಸರ್ವಮಾನ್ಯ ಅವಳನ್ನು ಹೆಮ್ಮೆಗೊಳಿಸುತ್ತಿತ್ತು. ಕಲಾಸಾರ್ವಭೌಮ ಮಣೀಂದ್ರನ ಮನೆವಾರ್ತೆಗಾತಿ....ಕಲಾ ಪ್ರಚೋದಕಳು....ಗೆಳತಿ ಎಂದು ನೆನೆಯುತ್ತ, ಅವಳ ಹೃದಯ ಅಮಲಾನಂದದಿಂದ ಉಬ್ಬುವುದು. ಮರುಕ್ಷಣವೇ ಮಣೀಂದ್ರನ ಭೋಗದ ಹೆಣ್ಣು.... ಎಂಬ ನೆನಪು ಬಂದು ಆಳ ಅಂತ್ಯವರಿಯದ ಮಹಾಕೂಪಕ್ಕೆ ತಾನು ಬಿದ್ದೆನೆಂದು ನೊಂದು ಹಿಂಡಿಹೋಗುವುದು.

'ಆದರೇನು? ನನ್ನ ಬಾಳಿಗೆ ಅವನೊಬ್ಬನೇ ಪುರುಷ. ಭಿಕ್ಷುಕಿಯಾದರೇನು! ಬಡವಿಯಾದರೇನು! ಸ್ತ್ರೀಯಲ್ಲವೇ?' ಎಂದುಕೊಳ್ಳುವಳು.

'ಆದರೆ ಮಣೀಂದ್ರ ಮಹಾಶಯನಿಗೆ ಹಾಗಲ್ಲವಲ್ಲಾ; ಆತನ ಬಾಳಿಗೆ ನಾನು ಒಬ್ಬ ಸ್ತ್ರೀಯಷ್ಟೇ!' ಎಂದು ರೋದಿಸುತ್ತಾ ಕುಳಿತುಕೊಳ್ಳುವಳು. ಪರಿಶುದ್ಧ ಪ್ರೇಮಕ್ಕೆ ಎಡೆಗೊಟ್ಟ ಸ್ತ್ರೀ ಹೃದಯದಲ್ಲಿ ಎಂತಹ ಅಮಾನುಷ ಲೀಲಾವಿಲಾಸವಿದೆ. ದೇವತಾಸದೃಶವಾದ ಎಂತಹ ಮರುಕ, ಕ್ಷಮೆ, ಅಂತಃಕರಣಗಳಿವೆ ಎಂಬುದರ ಅರಿವು ಕ್ರಮಕ್ರಮೇಣ ಚಾರುವಿಗೆ ಅನುಭವಕ್ಕೆ ಬರುತ್ತಾ ಬಂತು.

ಸುಖವಿಲಾಸಗಳನ್ನು ಅರಸುತ್ತ ಹೊರಟ ಮಾಣಿಯನ್ನು ಅವನ ಸಹಜ ಗುಣ ಒಂದರಿಂದ ಒಂದಕ್ಕೆ ಎಳೆದೊಯ್ಯುತ್ತಾ ಬಂತು. ಶ್ರೀಮಂತರ ಸಹವಾಸ ಅನೇಕ ದುಷ್ಟ ಹವ್ಯಾಸಗಳನ್ನು ಉಪದೇಶಿಸುತ್ತಾ ಬಂದಿತು. ಸುಖಜೀವನದ ಹಸಿವು ಅವನಿಗೆ ಕೊಂಚ ಕಾಲದಲ್ಲಿ ಅಧಃಪತ

ಸದ ಆಳವನ್ನು ತೋರುತ್ತ ಬಂದಿತು. ಮಿತವರಿಯದ ಸ್ತ್ರೀಸಂಗವನ್ನು ಸಾಧಿಸಲು ಅವಶ್ಯಕವಾದ ಶಕ್ತಿಯನ್ನು ಮದ್ಯಸೇವನೆಯಿಂದ ದೊರಕಿಸಿ ಕೊಳ್ಳಲೆತ್ನಿಸಿದ.

ಕಲೆ ಮಾಣಿಗೆ ಕೇವಲ ಮಧುಮಾಧವಿಯರನ್ನು ಒದಗಿಸುವ ಸಾಧನವಾಯಿತು. ಎಂದಿನವರೆಗೆ ತಾನು ಬಯಸಿದ ಹೆಣ್ಣು ತೃಪ್ತವಾಗಿ ತನ್ನ ಕಾಮಲಾಲಸೆಯನ್ನು ಪೂರೈಸುವುದೋ ಅಂದಿನವರೆಗೆ ಕಲೆಯ ಕಡೆ ಅವನ ಗಮನವೇ ಹೋಗದು. ತಾನು ಒಲಿದ ಹೆಣ್ಣು ಬಯಸಿದರೇ ಕುಂಚ ಮುಟ್ಟುವನು. ಆಕೆ ಬಯಸದಿದ್ದರೆ ಕುಂಚ ಬಣ್ಣಗಳ ಕಡೆ ಕಣ್ಣೆತ್ತಿಯೂ ನೋಡ. ಈ ಸುಖಸಾಮ್ರಾಜ್ಯದಲ್ಲಿ ಬಡ 'ಮಧುಕರ'ನನ್ನು ಪೂರ್ಣವಾಗಿ ಮರತೇ ಬಿಟ್ಟ. ಹಳೆಯ ಮಮತೆಯಿಂದ ಸಂಪಾದಕ ಮಂಡಳಿ ಒಂದೆರೆಡು ಬಾರಿ ಎಚ್ಚರ ಕೊಟ್ಟು ನೋಡಿತು. ಮಾಣಿಯಿಂದ ಯಾವ ಪ್ರಯೋಜನವೂ ಮುಂದಾಗುವ ಸಂಭವವಿಲ್ಲವೆಂದು ಅವರಿಗೆ ಮನದಟ್ಟಾದ ಮೇಲೆ ಕೆಲಸದ ಉಪಾಧಿಯಿರಬಾರದೆಂದು ಅವನನ್ನು ನಿವೃತ್ತನನ್ನಾಗಿಸಿಬಿಟ್ಟರು. ಸಂಪಾದಕರ ಪತ್ರವನ್ನು ನಗುತ್ತ ಓದಿ ಕೊಂಡು ತನ್ನ ಬಳಿಯಲ್ಲಿದ್ದ ರಮಣಿಗೂ ತೋರಿಸಿ ಕಡ್ಡಿಗೀರಿ ಅದನ್ನು ಹೊತ್ತಿಸಿ ಅದರಿಂದ ತನ್ನ ಸಿಗರೇಟನ್ನು ಹಚ್ಚಿಕೊಂಡು ಬಗೆಬಗೆಯಾಗಿ ಧೂಮ ಬಿಡುತ್ತ ಅದರಲ್ಲಿ ಹೊರಡುತ್ತಿದ್ದ ಆಕಾರಗಳನ್ನು ನೋಡಿ ಹಿಗ್ಗುತ್ತ ಕುಳಿತ.

ಬರುತ್ತಿದ ನಿಖರವಾದ ಆದಾಯ ನಿಂತುಹೋಯಿತು. ಖರ್ಚು ವೆಚ್ಚಗಳು ದಿನದಿನಕ್ಕೂ ಬೆಳೆಯಲಾರಂಭವಾದವು. ಸಾಲಗಾರರಿಗೆ ಸುಳ್ಳು ಹೇಳಿ ಹೇಳಿ ಚಾರುವಿಗೂ ಸಾಕಾಗುತ್ತ ಬಂತು. ಪ್ರತಿಯೊಂದು ಸಣ್ಣ ವಿಚಾರಕ್ಕೂ ಕಂಡವರನ್ನು ಕೇಳಿ ಕೇಳಿ ಮಾಣಿಗೂ ಬೇಸರವಾಗುತ್ತ ಬಂತು. ಒಂದು ದಿವಸ ಹೊಸ ಚಿತ್ರವೊಂದನ್ನು ರಚಿಸಿ ಮಾರಿ ಸಾಲಗಾರರನ್ನು ಸ್ವಲ್ಪ ಸಮಾಧಾನಗೊಳಿಸಲು ನಿಶ್ಚಯಿಸಿದ. ಸಾಮಾನ್ಯ 'ಭಾವಚಿತ್ರ'ಗಳನ್ನು ಮಾಡುವ ಕಾಲ ಈಗ ಮುಗಿದು ಹೋಗಿದ್ದಿತು. 'ನಗ್ನಚಿತ್ರ'ಗಳಲ್ಲದೆ ಬೇರೆ ಯಾವ ಚಿತ್ರವನ್ನೂ ಮಾಣಿ ಮಾಡಲಾರದಾಗಿ ಹೋಗಿದ್ದ. ತನ್ನ ಬಳಕೆಯ ವಿಲಾಸಿನಿಯೊಬ್ಬಳನ್ನು ಕೂಡಿಸಿ 'ನೃತ್ಯಮಗ್ನೆ

ಯಾದ 'ಊರ್ವಶಿ' ಯನ್ನು ಚಿತ್ರಿಸಲಾರಂಭಿಸಿದ. ಚಿತ್ರ ಆರಂಭಿಸಿದ ಸಂಜೆಯೇ ಮುಗಿಯಬೇಕೆಂದು ನಿರ್ಧರಿಸಿದ್ದಂತೆ ಒಳ್ಳೆಯ ಹುರುಪಿನಿಂದ ಸಾಗಿತ್ತು. ಯಾರೋ ಬಾಗಿಲು ತಟ್ಟಿದಂತಾಯಿತು. ಚಾರುಬಾಲಾ ಬಾಗಿಲು ತೆಗೆದು ಹೊರಗೆ ಹೋಗಬೇಕೆಂದಿರುವಲ್ಲಿ ನೀಲರಂಜನ ಒಳಗೆ ಪ್ರವೇಶಿಸಿ ಬಿಟ್ಟ. ಮಾಣಿ ಅವನನ್ನು ನೋಡಿ ಅವಾಕ್ಕಾದ. ನಗ್ನೆಯಾಗಿ ಕುಳಿತಿದ್ದ ಸ್ತ್ರೀಯನ್ನು ಕಂಡು ನೀಲಾ ನಾಚಿ ಕತ್ತು ತಿರುಗಿಸಿ ನಿಂತ. ಆಕೆ ಒಳಗೆ ಹೋದ ಮೇಲೆ ಷಲಿಗೆಯಿಂದ ಕೈಹಾಕಿ

"ಕುಶಲವೇ ಮಣಿ ಬಾಬು."

"ಆ! ಹಾ! ಕುಶಲ! ಕುಳಿತುಕೋ ನೀಲಾ" ಎಂದು ತಡಬಡಿಸುತ್ತ ಮಾತನಾಡಿ ಅವಸರದಿಂದ ತಾನು ರಚಿಸುತ್ತಿದ್ದ ಚಿತ್ರದ ಮೇಲೆ ತೆರೆಯನ್ನೆಳೆದು ತಾನೂ ಕುಳಿತ. ನೀಲ ಅಲ್ಲಿಗೆ ಬಂದ ಬಗೆ ಮಾಣಿಗೆ ಆಶ್ಚರ್ಯವನ್ನುಂಟುಮಾಡಿತ್ತು. ಮಾಣಿಯ ಚಿತ್ತವಿಕಲ್ಪವನ್ನು ಕಂಡು ನೀಲನೇ ಮಾತು ತೆಗೆದ.

"ನನ್ನ ಶಿಕ್ಷಣ ಮುಗಿಯಿತು. ಮಾಣಿ. ಊರಿಗೆ ಹೊರಟಿರುವೆ."

"ಇನ್ನೂ ಎರಡು ವರ್ಷವಿರಲಿಲ್ಲವೆ ನಿನಗೆ ?"

"ಇತ್ತು. ಆದರೆ 'ನಿಷ್ಣಾತನಾದೆ'ಯೆಂದು ಗುರುದೇವರು ಹರಸಿದರು."

"ನೀನೇ ಧನ್ಯ ನೀಲಾ."

"'ಮಧುಕರ' ಕಾರ್ಯಾಲಯದವರಿಂದ ನಿನ್ನ ವಿಳಾಸ ತಿಳಿದು ನೋಡಿ ಹೋಗೋಣವೆಂದು ಬಂದೆ. ತಪ್ಪಾಯಿತು. ಈ ವೇಳೆಗೆ ನಾನು ಬರಬಾರದಾಗಿತ್ತು."

"ಅಂತಹದೇನೂ ಇಲ್ಲ ನೀಲಾ. ಚಹ ತೆಗೆದುಕೊಳ್ಳುವಿಯಾ ? ಚಾರು.........ಎರಡು ಕಪ್ ಚಹಾ."

"ನಿನ್ನ ಹೊಸ ಚಿತ್ರವನ್ನು ನಾನು ನೋಡಬಹುದೇ ಮಾಣಿ"

"ನೋ....ಡು...." ಎಂದು ತೆರೆಯನ್ನೆಳೆದ. ನೀಲ ಕ್ಷಣಕಾಲ 'ಊರ್ವಶಿ'ಯನ್ನು ನೋಡಿ ಮರುಮಾತನಾಡದೆ ಒನ್ಮೆ ಮಾಣಿಯನ್ನು ನೋಡಿ ಕತ್ತು ತಗ್ಗಿಸಿದ. 'ಹೇಗಿದೆ' ಎಂದು ಕೇಳುವ ಧೈರ್ಯ ಮಾಣಿಗೆ

ಉಂಟಾಗಲಿಲ್ಲ. ಚಿತ್ರದ ವಿಮರ್ಶೆ ನೀಲನ ಮುಖದಲ್ಲಿ ದಪ್ಪ ದಪ್ಪ ಅಕ್ಷರಗಳಿಂದ ಬರೆದಂತಿತ್ತು. ಇಬ್ಬರೂ ಕೆಲಕಾಲ ಮಾತನಾಡದೆ ಕುಳಿತರು. ಚಾರು ಚಹ ತೆಗೆದುಕೊಂಡು ಬಂದು ಇಬ್ಬರಿಗೂ ಇತ್ತಳು. ಮಾಣಿ ನೀಲನ ಪರಿಚಯ ಮಾಡಿಕೊಟ್ಟು ಸೂಕ್ಷ್ಮವಾಗಿ ಅವನ ಸಂಬಂಧವನ್ನರುಹಿದ. ನೀಲನೊಮ್ಮೆ ಆಕೆಯನ್ನು ನೋಡಿ

"ಈ ತಂಗಿ ಯಾರು ಮಾಣಿ. ಕುಟುಂಬವೇ ?"

ಚಾರುವಿನ ಕಣ್ಣಲ್ಲಿ ನೀರುತುಂಬಿತು. ಅಲ್ಲಿ ನಿಲ್ಲಲಾರದೆ ಒಳಗೆ ಹೊರಟುಹೋದಳು. ನೀಲನಿಗೆ ತನ್ನನ್ನೇ ತಾನು ಕತ್ತರಿಸಿಕೊಳ್ಳು ವಂತಾಯಿತು. ಮಾಣಿ ಉತ್ತರಹೇಳಲು ಒಂದೆರಡು ಬಾರಿ ಪ್ರಯತ್ನಿಸಿ ಸುಮ್ಮನಾದ. ಸಂದರ್ಶನ ಸಾಕೆಂದು ನೀಲನೆದ್ದ. ಕಣ್ಣುಗಳಲ್ಲಿ ನೀರು ತುಂಬಿತ್ತು.

"ಆ ತಂಗಿಯನ್ನು ಬರಮಾಡು ಮಾಣಿ."

ಮಾಣಿ ಚಾರುವನ್ನು ಕರೆತಂದು ನೀಲನೆದುರಿಗೆ ನಿಲ್ಲಿಸಿದ. ಆಕೆ ಯನ್ನೊಮ್ಮೆ ಅನಂತಕರುಣೆಯಿಂದ ನೋಡಿ ನೀಲ

"ತಂಗೀ........ನನ್ನನ್ನು ಕ್ಷಮಿಸು. ನಿನ್ನ ತಾಯಿ ನನಗೆ ದೂರದ ಚಿಕ್ಕಮ್ಮನಾಗಬೇಕು. ಅದಕ್ಕೆ........ಆ ಪ್ರಶ್ನೆ...................." ಎಂದು ಹೇಳಿ ಹೊರಟೇ ಹೋದ. ಮುಖವನ್ನು ಮುಚ್ಚಿಕೊಂಡು ಚಾರು ದುಃಖಿಸುತ್ತ ಕುಳಿತಿಳು. ಸ್ವಲ್ಪಹೊತ್ತು ನೀಲನ ನುಡಿ ಮಾಣಿಯನ್ನು ನಿಶ್ಚೇತನಗೊಳಿಸಿತು. ಆ ವೇಳೆಗೆ ಊಸ್ವಸಿ ವೇಷಧರಿಸಿ ಬಂದು ಮಾಣಿಯನ್ನು ಹೊರಗೆ ಎಳೆದೊಯ್ದಳು.

"ಹಿಂದಕ್ಕೆ ಬಾ"ರೆಂದು ಕರೆಯುವುದಕ್ಕೆ ಎದ್ದ ಚಾರು, ಹಾಗೆಯೇ ಕುಸಿದು ನೆಲಕ್ಕೆ ಬಿದ್ದು ಬಿಟ್ಟಳು.

## ೧೯

ಬೆಳಿಗ್ಗೆ ಮಾಣಿ ಏಳುವ ಹೊತ್ತಿಗೆ....ಅಂದರೆ ಹತ್ತು ಘಂಟೆಯ ಸಮಯಕ್ಕೆ....ಯಾರೋ ಬಾಗಿಲು ತಟ್ಟಿದಂತಾಯಿತು. ತೆರೆದು ನೋಡಲು ಒಣಗಿದ ಮೈಯ ಒಬ್ಬ ಬಾಲಕ. ಹಿಂದೆ ಎಲ್ಲಿಯೋ ನೋಡಿದ ಗುರುತು.

ಆದರೆ ನಿದ್ದೆಯ ಮಂಪರದಲ್ಲಿ ಕೂಡಲೆ ಜ್ಞಾಪಕಕ್ಕೆ ಬರಲಿಲ್ಲ. ಕಣ್ಣು ಗಳನ್ನುಜ್ಜಿಕೊಂಡು

"ನೀನು ಯಾರು ?"

"ಬಿಶ್ವಾಸ್."

"ಬಿಶ್ವಾಸ್........ಯಾವ ಬಿಶ್ವಾಸ್?"

"ಚಾರುದಾಸಿಯ ತಮ್ಮ."

"ಒಹೋ ! ಏನು ಬಂದೆ ಬಿಶ್ವಾಸ್ ?"

"ಅಮ್ಮ ಈ ಪತ್ರ ಬರೆಸಿ ಕಳುಹಿಸಿದ್ದಾಳೆ. ತಮ್ಮನ್ನು ಜತೆಯಲ್ಲಿಯೇ ಕರೆದು ತರಬೇಕೆಂದು ಹೇಳಿದಳು."

"ಚಾರುವೆಲ್ಲಿ ?"

ಬಾಲಕ ಅಳತೊಡಗಿದ. ಮಾಣಿ ಆತುರದಿಂದ ಪತ್ರವನ್ನು ಓದಿಕೊಂಡ. ನೇರವಾದ ಎರಡೇ ಮಾತುಗಳು. ಮಾಣಿಯ ಶಕ್ತಿ ಉಡುಗಿತು. ದೇಹಾದ್ಯಂತವೂ ಕಂಪಿಸತೊಡಗಿತು. ಮೈ ಬೆವರಿ ಬಟ್ಟೆಗಳು ತೊಯ್ದು ಹೋದವು. ಮತ್ತೆ ಮತ್ತೆ ಕಾಗದ ಓದಿಕೊಂಡ.

"ಮಹಾಶಯ,

ಯಾರೋ ಪುಣ್ಯಾತ್ಮರು ಚಾರುವಿನ ಮೃತದೇಹವನ್ನು ಮನೆಗೆ ತಂದು ಹಾಕಿದ್ದಾರೆ. ದಯಮಾಡಿ ಬಡವರ ಮನೆಯವರೆಗೆ ಒಂದು ಸಲ ಬಂದು ಹೋಗಬೇಕು."

ದಿಕ್ಕೇ ತೋಚದಂತಾಯಿತು. ಕಾಗದ ಕೇವಲ ಮೋಸವೋ ಎಂದುಕೊಂಡ. ಬಿಶ್ವಾಸನ ಮುಖದಲ್ಲಿ ಮೂಡಿದ್ದ ಭಯಂಕರ ಅನುತಾಪದ ಜ್ವಾಲೆ ಅವನ ಸಂಶಯವನ್ನು ಹುಟ್ಟಿನಲ್ಲಿಯೇ ಸುಟ್ಟು ಬಿಟ್ಟಿತು. 'ಹೋಗಲೋ ಬೇಡವೋ' ಎಂದು ಯೋಚಿಸತೊಡಗಿದ. ಬಗೆಹರಿಯದಾಯಿತು. ಯೋಚಿಸುತ್ತ ಯೋಚಿಸುತ್ತ ಸಮಸ್ಯೆ ಗಾಢವಾಗುತ್ತ ಬಂದಿತು. ಕೊನೆಗೆ ಏನನ್ನೊ ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಹತ್ತು ರೂಪಾಯಿನ ಎರಡು ನೋಟುಗಳನ್ನು ಬಿಶ್ವಾಸನ ಕೈಯಲ್ಲಿಟ್ಟು

"ನಿಮ್ಮ ತಾಯಿಗೆ ಇವನ್ನು ಕೊಟ್ಟುಬಿಡು. ನಾನು ನಿಧಾನವಾಗಿ

ಬಂದು ನೋಡುತ್ತೇನೆಂದು ಹೇಳು" ಎಂದು ಆವನನ್ನು ಕಳುಹಿಸಿ ಬಂದು ಚಿಂತಿಸುತ್ತ ಕುಳಿತ. ಹಿಂದಿನ ದಿವಸ ತಾನು ಅರ್ಧ ಮುಗಿಸಿದ್ದ 'ಊರ್ವಸಿ' ಚಿತ್ರದ ಕಡೆಗೆ ಗಮನ ಹೋಯಿತು. 'ಊರ್ವಸಿ'ಯ ಮುಂದಿದ್ದ ಗಾಜಿನ ಕುದುರೆಯ ಕಾಲಿನ ಕೆಳಗೆ ಒಂದು ಪತ್ರ ಇಣಕಿ ನೋಡುತ್ತಿದ್ದಂತೆ ಭಾಸವಾಯಿತು. ಕೂಡಲೆ ಅದನ್ನು ಎಳೆದುಕೊಂಡು ನೋಡತೊಡಗಿದ. ಚಾರುವಿನ ಅಕ್ಷರ

"ಪ್ರಿಯತಮಾ,

ಹೀಗೆಂದು ಸಂಬೋಧಿಸಿರುವುದಕ್ಕೆ ಕ್ಷಮಿಸಿರಿ. ನೀವು ಎಂದೆಂದಿಗೂ ನನ್ನ ಪ್ರಿಯತಮರೇ!—ಆದರೆ ಅಜ್ಞಳಾದ ನನಗೆ ಆ ಸ್ಥಳ ಮಾತ್ರ ನಿಮ್ಮ ಜೀವನದಲ್ಲಿ ಇಲ್ಲವಾಯಿತು. ಭೋಗದ ಹೆಣ್ಣಿಗೆ ಯೋಗ್ಯಸ್ಥಾನವನ್ನು ಯಾರುತಾನೇ ಕೊಡುತ್ತಾರೆ? ನಿಮ್ಮ ಜೀವನಯಾತ್ರೆಗೆ ಕುಂದು ಬರದಿರಲೆಂದು ನಾನು ನಿಮ್ಮ ಹಾದಿಯಿಂದ ಸರಿದಿರುವೆನು. ಇಷ್ಟು ದಿವಸವೂ ನನ್ನನ್ನು ಕಾಪಾಡಿದಂತೆ........ನನ್ನ ಬಡತಾಯಿ, ತಂಗಿ, ತಮ್ಮಂದಿರನ್ನು ಕಾಪಾಡಬೇಕಾಗಿ ದೀನಳಾಗಿ ಬೇಡುವ

ತಮ್ಮ ಚರಣದಾಸಿ—**ಚಾರು.**"

ಕಾಗದದ ಸರಳಭಾವ – ನಿಷ್ಕಾಮ ಪ್ರೇಮ ಮಾಣಿಯ ಹೃದಯವನ್ನು ಝುಲ್ಲೆಸಿಸಿತು. ತನ್ನ ಪಾಪವೃತ್ತಿ ಎಲ್ಲಿಗೆ ಎಳೆದೊಯ್ಯುತ್ತಿದೆ ಎಂಬು ದನ್ನು ಗ್ರಹಿಸಿದ. ಕಣ್ಣುಗಳಲ್ಲಿ ಧಾರಾಕಾರವಾಗಿ ಅಶ್ರುಜಲ ಹೊರಟಿತು. ಗೋಡೆಯ ಮೇಲಿದ್ದ ಚಾರುವಿನ ಚಿತ್ರವನ್ನು ದಿಟ್ಟಿಸಿ ನೋಡುತ್ತ

"ಕ್ಷಮಿಸು ಚಾರು – ನಾನು ಮಹಾಪರಾಧಿ........ನೀನು ಸ್ನೇಹದ, ಪ್ರೇಮದ ಪವಿತ್ರಮೂರ್ತಿ" ಎಂದು ಮೊರೆಯಿಟ್ಟ. ಯಾರೋ ಘಟ್ಟ ಯಾಗಿ ನಕ್ಕಂತಾಯಿತು. ಹಿಂದಿರುಗಿ ನೋಡಲು 'ಊರ್ವಸಿ' ನಗುತ್ತಾ ಬಳುಕುತ್ತಾ ಮುಂದೆ ಬಂದು ಮಾಣಿಯ ತಲೆ ನೇವರಿಸಿ, ಅವನ ಕಣ್ಣಿನಂಚಿನಲ್ಲಿ ನಿಂತಿದ್ದ ಒಂದು ಹನಿಯನ್ನು ಬೆರಳಿನ ತುದಿಯಲ್ಲಿ ಸೆರೆಹಿಡಿದು ತಿರಸ್ಕಾರದಿಂದ ಅದನ್ನು ನೋಡಿ ಕೆಳಗೆ ಕೆಡವಿ

"ಕಲಾವಿದರು ಅಳುತ್ತಿದ್ದಾರೆ."

"ಇಲ್ಲ! ದುಃಖಿಸುತ್ತಿದ್ದಾರೆ."

"ಏತಕ್ಕೆ? ಊರ್ವಸಿ ಚಿತ್ರ ಮುಗಿಯಲಿಲ್ಲವೆಂದೇ?"

"ಅಲ್ಲ! ಮಾಣಿಯ ಜೀವನ ಮುಗಿಯಲಿಲ್ಲವೆಂದು."

"ಕಲಾವಿದರಿಗೆ ಹುಚ್ಚು ಹಿಡಿದಿದೆ."

"ಸತ್ಯವಾದ ಮಾತು. ಹುಚ್ಚು ಹಿಡಿಯಲು ಆರಂಭವಾಗಿದೆ."

ಊರ್ವಸಿ ಪಕ್ಕದಲ್ಲಿ ಬಂದು ಕುಳಿತು ಕೆನ್ನೆಗೆ ಕೆನ್ನೆಯಿಟ್ಟು ಮೃದೂಕ್ತಿಗಳನ್ನಾಡುತ್ತ

"ಏತಕ್ಕಿಷ್ಟು ದುಃಖ ಸುಂದರಾ?"

ಮಾಣಿ ನಿರುತ್ತರನಾಗಿ ಚಾರುವಿನ ಮತ್ತು ಅವಳ ತಾಯಿಯ ಕಾಗದವನ್ನು ಊರ್ವಸಿಯ ಕೈಯಲ್ಲಿ ಕೊಟ್ಟ. ಊರ್ವಸಿ ಓದಿಕೊಂಡು ಕಡ್ಡಿ ಗೀರಿ ಅವುಗಳೆರಡನ್ನೂ ಸುಟ್ಟು ಮೆಲ್ಲನೆ ಮಾಣಿಯ ಕಡೆ ತಿರುಗಿದಳು.

"ಇಷ್ಟಕ್ಕಿಷ್ಟು ದುಃಖವೇ ಸುಂದರಾ! ಏಳು, ಇವತ್ತು ಮಧುಸೂದನನ ಪಾರ್ಟಿ ಇರುವುದನ್ನು ಮರೆತೆಯೇನು?"

"ನಾನು ಬರುವುದಿಲ್ಲ, ನೀನು ಹೋಗಬಹುದು."

"ನಾನು ಹೋಗಿಯೇ ಹೋಗುತ್ತೇನೆ! ನೀನೂ ನನ್ನೊಂದಿಗೆ ಬರುವೆ. ಸಂಜೆಗೆ ಹಿಂದಿರುಗಿದ ಮೇಲೆ ಚಿತ್ರವನ್ನು ನೀನು ಮುಗಿಸಿ........ ನನ್ನೊಂದಿಗೆ........" ಎಂದು ಸೆರೆ ಹಿಡಿಯುವ ಕಣ್ಣುಗಳ ದೃಷ್ಟಿಯನ್ನು ಮಾಣಿಯ ಮೇಲೆ ಬೀರಿದಳು. ಅವಳ ನೆಟ್ಟ ನೋಟದ ಘಾತದಿಂದ ನೊಂದು ಅವಳ ಆಲಿಂಗನ ಬಂಧನಕ್ಕೆ ತುತ್ತಾದ.

ಮಾಣಿಯ ಬಾಳುವೆ ಯೋಗ್ಯಜೀವನದಿಂದ ಒಂದೊಂದು ಹಂತ ವಾಗಿ ಇಳಿಯುತ್ತ ಬಂತು. ದೇಹದಲ್ಲಿ ವನಚರಗಳಂತೆ ಅಡಗಿ ಕುಳಿತಿದ್ದ ದುಷ್ಟ ಲಾಲಸೆಗಳನ್ನು ಹದ್ದಿನಲ್ಲಿ ಇಡತಕ್ಕ ಯಾವ ಅಂಕುಶವೂ ಅವನಲ್ಲಿ ಇಲ್ಲವಾಯಿತು. ತನ್ನ ಸ್ಥಿತಿಯನ್ನು ನೆನೆದು ಅದರ ಅವನತ ಚಿತ್ರವನ್ನು ಚಿತ್ತದಮೇಲೆ ತಂದುಕೊಳ್ಳುವಷ್ಟು ಶಕ್ತಿಯೂ ಅವನಲ್ಲಿ ಉಳಿಯಲಿಲ್ಲ. ಮದ್ಯದ ಅಮಲು ಕಳೆದರೆ ಸುಂದರಿಯರ ಸಹವಾಸ. ಹೀಗಾಗಿ ಅವನ ಜೀವನ ಸುರೆ, ಸುಂದರಿಯರಿಗೆ ಮೀಸಲಾಗುತ್ತ ಬಂದಿತು.

ಆರೇಳು ತಿಂಗಳು ಹೀಗೆಯೇ ಕಳೆಯಿತು. ತನ್ನ ಜೀವನದಲ್ಲಿ ಮುಸುಕುತ್ತಿದ್ದ ಮೋಡದ ಅರಿವು ಮಾಣಿಗಿರಲಿಲ್ಲ. ಜೀವನ ಸದಾ ತಿಂಗಳಿನ ಬೆಳಕೆಂಬ ಅವನ ಸವಿಗನಸು ಛಿದ್ರಛಿದ್ರವಾಗಿ ಒಡೆದುಹೋಗುವ ಕಾಲ ಸಮೀಪಿಸುತ್ತಿದೆಯೆಂಬುದು ಅವನ ಗಮನಕ್ಕೆ ಬಿದ್ದಿರಲಿಲ್ಲ.

ಮನೆಯನ್ನು ಬಾಡಿಗೆಗೆ ಕೊಟ್ಟಿದ್ದವನು ಗಲಾಟೆಗೆ ಆರಂಭಿಸಿದ. ಐದು ಆರು ತಿಂಗಳಿಂದ ಬಾಡಿಗೆಯ ಮುಖವನ್ನವನು ಕಂಡಿರಲಿಲ್ಲ; ಮದ್ಯದ ಅಂಗಡಿಯವನು—ಸಿಗರೇಟಿನ ಅಂಗಡಿಯವನು—ಹೋಟಲಿನವನು—ಮೋಟರುಗಳನ್ನು ಬಾಡಿಗೆಗೆ ಇಟ್ಟಿರುವ ಅಂಗಡಿಯವನು—ಎಲ್ಲರೂ ತಮ್ಮ ತಮ್ಮ ಬಾಕಿ ವಸೂಲಿಗೆ ಹೊರಟರು. ಚಿತ್ರಗಳನ್ನು ರಚಿಸಿ ಸಾಲ ತೀರಿಸುತ್ತೇನೆಂಬ ಧೈರ್ಯವೂ ಮಾಣಿಗಿಲ್ಲವಾಯಿತು. ಕುಂಚ ಹಿಡಿದು ಆರೇಳು ತಿಂಗಳಾಗಿತ್ತು. ಒಂದೆರಡು ವಾರಂಟುಗಳೂ ಸಿದ್ಧವಾದವು. ಹಣವನ್ನು ಎಲ್ಲಿಂದಾದರೂ ತಂದು ತೀರಿಸಬೇಕು—ಇಲ್ಲವಾದರೆ ಚಾರುವಿನ ಮಾರ್ಗವನ್ನೇ ಹಿಡಿಯಬೇಕು. ಸಾವಿನ ಚಿಂತೆ ಬಂದೊಡನೆಯೇ ಪ್ರಬಲವಾದ ಭೀತಿ ಆವರಿಸಿತು. ಸಾಯುವುದಕ್ಕೆ ಬೇಕಾದ ಮನೋದಾರ್ಢ್ಯ ತನ್ನಲ್ಲಿಲ್ಲವೆಂದು ಮರುಕ್ಷಣದಲ್ಲಿ ಗ್ರಹಿಸಿದ. ಮುಂದೆ ಸಿವಿಲ್ ಜೈಲು ಸೇರಿ ಬಾಳನ್ನು ಸಾಗಿಸಬೇಕು. ಅಪಮಾನದ ಘಾತಕ್ಕಿಂತಲೂ ಸಾವೇ ಸುಖಕರವೆನಿಸಿತು. ಏನೋ ಯೋಚನೆ ಮಾಡಿಕೊಂಡು ಹೊರಗೆ ಹೊರಟ. ಗುರುತುಬಲ್ಲವರನ್ನೆಲ್ಲಾ ಸಾಲ ಕೇಳಲಾರಂಭಿಸಿದ—ತನ್ನಿಂದ ಮುಂದೆ ಬಂದಿದ್ದ ಸುಂದರಿಯರನ್ನು ಬೇಡಿದ—ತನ್ನ ಕಲೆಗೆ ತಲೆದೂಗಿದ್ದ ಶ್ರೀಮಂತರನ್ನು ಯಾಚಿಸಿದ!—ಯಾವ ಫಲವೂ ಕಂಡುಬರಲಿಲ್ಲ. ಕೊನೆಗೆ 'ಮಧುಕರ' ಸಂಪಾದಕರನ್ನು ಕೇಳಿಬಿಡುವುದು. ಅವರೂ ತಿರಸ್ಕರಿಸಿದರೆ....ಮುಂದಿನ ಯೋಚನೆ ಬೇಡವೆಂದು 'ಮಧುಕರ' ಕಾರ್ಯಾಲಯದ ಕಡೆಗೆ ತೆರಳಿದ.

ಸಂಪಾದಕರು ಎಲ್ಲೋ ಹೊರಗೆ ಹೋಗಿದ್ದವರು ಸ್ವಲ್ಪ ಹೊತ್ತಿನ ಅನಂತರ ಬಂದರು. ಮಾಣಿಯ ಸ್ಥಿತಿ ಅವರ ಹೃದಯವನ್ನು ಝಲ್ಲೆನಿಸಿತು, ಗುಣಿಬಿದ್ದ ಕಂಗಳು, ಕ್ಷೌರ ಕಾಣದ ಗಡ್ಡ, ಕೆದರಿದ ತಲೆ, ಹರಕು ಅಂಗಿ, ಕುಡತವನ್ನು ಕಂಡು ಮರುಕಗೊಂಡರು.

"ಏನು ಬಂದಿರಿ ಮಣೀಂದ್ರ ಬಾಬು ?"

"ಮಹಾಶಯ........"

ಮುಂದೆ ಮಾತು ಹೊರಡದೆ ತನ್ನ ಕಿಸೆಯಲ್ಲಿದ್ದ ತಗಾದೆಯ ಚೀಟಿಗಳನ್ನೆಲ್ಲಾ ಅವರ ಮುಂದಿಟ್ಟ. ಸಂಪಾದಕರು ಹಣವನ್ನೆಲ್ಲಾ ಕೂಡಿನೋಡಿಕೊಂಡು ವಿಚಾರಮಾಡುತ್ತಾ

"೨|| ಸಾವಿರ ರೂಪಾಯಿಗಳ ಮೇಲಾಗುವುದಲ್ಲಾ ಬಾಬೂ ?"

"ಹೌದು ಮಹಾಶಯ. ಹೇಗಾದರೂ....ಈ ಸಂಕಷ್ಟದಿಂದ ನನ್ನನ್ನು ಪಾರುಮಾಡಬೇಕು."

"ಅಷ್ಟು ಹಣವನ್ನೆಲ್ಲಿಂದ ತರಲಿ? ನೂರೋ ಇನ್ನೂರೋ ಆಗಿದ್ದರೆ ಆಗಲಿ ಎನ್ನಬಹುದಾಗಿತ್ತು."

"ಮಹಾಶಯಾ...." ಎಂದು ಮಾಣಿ ಅಳಲುಪಕ್ರಮಿಸಿದ. ಸುರೇಶ ಬಾಬುಗಳ ಕರುಳು ಮಿಡುಕಿತು. ತಮ್ಮ ಜೀವನಕ್ಕೆ ಚಿನ್ನದ ಕಳಶವಿಟ್ಟ ಕಲಾವಿದ ನಿರಾಧಾರಕನ್ಯೆಯಂತೆ ರೋದಿಸುವುದನ್ನು ಕಂಡು ಅವರ ಅಂತಃಕರಣದಲ್ಲಿ ತಳಮಳ ಹುಟ್ಟಿತು. ಮಾಣಿಗೆ ಧೈರ್ಯದ ಮಾತು ಹೇಳಿ

"ಸಂಜೆಗೆ ನಿಮ್ಮ ಮನೆಗೆ ಬರುವೆ ಬಾಬೂ. ನೋಡುವ ನನ್ನ ಕೈಯಲ್ಲಿ ಎಷ್ಟು ಸಾಧ್ಯವೋ ಅಷ್ಟು ಮಾಡುತ್ತೇನೆ."

ಕೃತಜ್ಞತೆಯನ್ನು ತಲೆಬಾಗಿ ಸೂಚಿಸಿ ಮಾಣಿ ಕಾರ್ಯಾಲಯ ಬಿಟ್ಟ. ತನ್ನ ಮನೆ ಎನಿಸಿಕೊಂಡಿದ್ದಲ್ಲಿಗೆ ಹೋಗಲು ಮನಸ್ಸು ಬಾರದಾಯಿತು. ಸಂಜೆಗೆ, ಸುರೇಶಬಾಬುಗಳು ಬರುವ ಹೊತ್ತಿಗೆ ಅಲ್ಲಿಗೆ ಹೋದರಾಯಿತು. ಎಂದುಕೊಂಡು 'ಸಾರ್ವಜನಿಕ ಉಪವನ'ದ (Public Gardens) ಕಡೆಗೆ ನಡೆದ.

ಒಂದು ಮರದ ಬುಡದಲ್ಲಿ ಕಾಲು ಚಾಚಿ ಮಲಗಿದ. ಎದುರಿಗೆ ಕಾಣುತ್ತಿದ್ದ ದೊಡ್ಡ ದೊಡ್ಡ ಸೌಧಗಳನ್ನು ನೋಡುತ್ತ ನಿಟ್ಟುಸಿರು ಬಿಟ್ಟ. ಅಂದಿನ ಜೀವನಯಾತ್ರೆ ಮುಗಿಸಿಕೊಂಡು ನಗುನಗುತ್ತ ತಲೆಗೂದಲಿಗೆ ಅಂಟುಕೊಂಡಿದ್ದ ಹತ್ತಿಯ ತುಣುಕುಗಳನ್ನು ಬಿಡಿಸಿ ಕೊಳ್ಳುತ್ತ ಹೋಗುತ್ತಿದ್ದ ಗಿರಿಣಿ ಕೂಲಿಕಾರರ ಒಂದು ತಂಡವನ್ನು

ನೋಡಿ ಅವನ ಹೃದಯ ತುಸು ಹಗುರವಾಯಿತು. ಜೀವನದ ಟೊಳ್ಳು ಗಟ್ಟಿ ಎದುರಿಗೆ ಸುಳಿದವು. ಹಿಂದೆ....ಬಹಳ ಹಿಂದೆ ಅಯ್ಯರ ಕ್ಲಬ್ಬಿನಲ್ಲಿ ತಾನು ದುಡಿಯುತ್ತಿದ್ದ ದಿವಸಗಳು ಜ್ಞಾಪಕಕ್ಕೆ ಬಂದವು.

'ಇಂದು ನಾನು ಮತ್ತೆ ಮನುಷ್ಯನಾಗಿ........ಸ್ವತಂತ್ರನಾಗಬಲ್ಲೆ ನಾದರೆ ಈ ಮುರಿದ ಜೀವನವನ್ನು...........' ಮುಂದೆ ಯೋಚನೆ ಬರದಾಯಿತು. ಮಗುವಿನಂತೆ ಅತ್ತುಬಿಟ್ಟ. ಕಣ್ಣೆತ್ತಿ ನೋಡಿದಾಗ ಏಳೆಂಟು ವರ್ಷದ ಮಗುವೊಂದು ಎದುರಿಗೆ ನಿಂತು, ಪಕ್ಕದಲ್ಲಿದ್ದ ದಾಸಿಯು ಕೈಯಲ್ಲಿದ್ದ ಬಿಸ್ಕತ್ತನ್ನು ತೆಗೆದುಕೊಂಡು ಮಾಣಿಗೆ ಕೊಡುತ್ತ

"ಏಕೆ ಬಾಬು, ಅಳುವೆ, ಹಸಿವಾಗುತ್ತಿದೆಯೋ? ತೆಗೆದುಕೋ" ಎಂದು ನುಡಿಯಿತು. ಮಗುವಿನ ಮನಸ್ಸನ್ನು ನೋಯಿಸಲಿಚ್ಛಿಸದೆ ಬಿಸ್ಕತ್ತನ್ನು ತಿಂದು ನಕ್ಕ. ಮಗುವೂ ನಕ್ಕು—ದಾಸಿಯೊಂದಿಗೆ ನಕ್ಕು—ಮುಂದಕ್ಕೆ ಹೋಯಿತು. ಆ ಮಗುವಿನ ಸರಳತನವನ್ನು ನೆನೆಯುತ್ತ ಕುಳಿತ-ಕಣ್ಣಿನಿಂದ ಅಶ್ರುಧಾರೆ ಹೊರಟಿತು - ಆದರೆ ಮನಸ್ಸಿನಲ್ಲಿ ಮೊದಲಿನ ದುಗುಡವಿಲ್ಲ - ಮೊದಲಿನ ನಿಸ್ಸಹಾಯಕತೆಯಿಲ್ಲ - ತನ್ನಂತಹ ಪಾಪಿಯ ಜೀವನಕ್ಕೂ ಬೆಳಕು ತರುವ ಇಂತಹ ಒಂದೊಂದು 'ದೈವಿಕ ಕಲಾಕೃತಿ' ಜಗತ್ತಿನಲ್ಲಿ ಉಳಿದಿದೆ, ಎಂದು ಸಮಾಧಾನಗೊಂಡು ಹಾಗೆಯೇ ಮಲಗಿದ.... ಆಯಾಸದಿಂದ ಕಣ್ಣಿಗೆ ಜೊಂಪು ಹಿಡಿದು ನಿದ್ರೆ ಬಂದಿತು.

ಏಳುವ ಹೊತ್ತಿಗೆ ಸಂಜೆ ಆರು ಘಂಟೆಯ ಸಮಯ. ಸುರೇಶಬಾಬು ಗಳನ್ನು ಕಾಯಿಸಿದಂತಾಯಿತಲ್ಲಾ ಎಂದು ಎದ್ದು ದುಗುಡದಿಂದ ಮನೆಯ ಕಡೆಗೆ ಓಡಿದ. ಬಾಗಿಲು ತೆರೆದೇ ಇತ್ತು. ತಾನು ಮನೆಯನ್ನು ಬಿಡುವ ಅವಸರದಲ್ಲಿ ಬೀಗವನ್ನು ಹಾಕಿಕೊಂಡು ಬರುವುದನ್ನೂ ಮರೆತಿದ್ದ. ಒಳಗೆ ಪ್ರವೇಶಿಸಿ ಎದುರಿಗೆ ನೋಡಿದ - ಕುರ್ಚಿಯ ಮೇಲೆ ನೀಲರಂಜನ ಪತ್ರಿಕೆಯೊಂದನ್ನು ಓದುತ್ತ ಕುಳಿತಿದ್ದ - ಮಾಣಿಯನ್ನು ಕಂಡು ಎದ್ದು ನಿಂತ. ನೀಲನನ್ನು ನೋಡಿದ ಕೂಡಲೇ ಮಾಣಿಯ ಎಲ್ಲ ಶಕ್ತಿ ಉತ್ಸಾಹವೂ ಕುಗ್ಗಿಹೋಯಿತು. ನೆಲಕ್ಕೆ ಹಾಗೆಯೇ ಬೀಳುತ್ತಿದ್ದ ಅವನನ್ನು ಹಿಡಿದೆತ್ತಿ ನೀಲ ಸೋಫಾದ ಮೇಲೆ ಮಲಗಿಸಿ, ನೀರು ತಂದು ಕುಡಿಸಿ ಪಕ್ಕದಲ್ಲಿ ಕುಳಿತ. ಮಾಣಿ ಸ್ವಲ್ಪ ಹೊತ್ತಾಗಲು ಕಣ್ತೆರೆದು

ನೋಡಿದ. ಸುರೇಶಬಾಬುವಲ್ಲ ನಿಜವಾಗಿಯೂ ನೀಲಾ. ತನ್ನ ಸ್ಥಿತಿಗತಿ ನೀಲನಿಗೆ–ಗೊತ್ತಾದುದಕ್ಕೆ ಮನಸ್ಸು ಹಿಂಡಿಹೋಯಿತು. ಸುಧಾರಿಸಿ ಕೊಂಡು ಕುಳಿತು

"ನೀನು ಹೇಗೆ ಬಂದೆ ನೀಲಾ ?"

"ಸುರೇಶಬಾಬು ಸುದ್ದಿ ಕಳುಹಿಸಿದರು."

"ಅವರು ಬರುವುದಿಲ್ಲವೇ ?"

"ಇಲ್ಲ! ಆದರೆ ಇದನ್ನು ಕಳುಹಿಸಿದ್ದಾರೆ."

ಎಂದು ಒಂದು ಕವರನ್ನು ಮಾಣಿಯ ಕೈಗಿತ್ತ. ಮಾಣಿ ತ್ವರೆಯಿಂದ ಒಡೆದು ನೋಡಿದ. ಏಳೆಂಟು ಹಣ ಸಂದ ರಸೀತಿಗಳು. ಎಲ್ಲರ ಸಾಲವೂ ತೀರಿತ್ತು. ಮಾಣಿ ಋಣವಿಮುಕ್ತನಾಗಿದ್ದ; ಅದರ ಜತೆಗೆ ಹತ್ತು ರೂಪಾಯಿನ ಹತ್ತು ನೋಟುಗಳು—'ಋಣ ತೀರಲಿಲ್ಲ, ಆರಂಭ ವಾಯಿತು' ಎಂದಂದುಕೊಂಡು, ಇಂತಹ ಸಂತಸದ ಸುದ್ದಿಯನ್ನು ತಂದ ನೀಲನನ್ನು ಭರದಿಂದ ಅಪ್ಪಿದ. ಸಂತಸದ ಉದ್ವೇಗ ತುಸು ಕಡಿಮೆ ಯಾಗಲು

"ನಿನ್ನನ್ನು ಕೊನೆಯಬಾರಿ ಕಂಡು ಹೋಗಲು ಬಂದೆ ಮಾಣಿ."

"ಏನು! ಕೊನೆಯಬಾರಿ ಕಾಣುವುದಕ್ಕೆ! ಹಾಗೆಂದರೆ!"

"ನಾನು ನಾಳೆ ಬಡೋದೆಗೆ ಹೊರಡುತ್ತೇನೆ. ಅಲ್ಲಿನ ಕಲಾಶಾಲೆಯಲ್ಲಿ ಉಪಾಧ್ಯಕ್ಷಪದವಿ ಸಿಕ್ಕಿದೆ."

ದುಃಖಸಂತೋಷಗಳೆರಡೂ ಒಮ್ಮೆಯೇ ಇಬ್ಬರಿಗೂ ಉಕ್ಕಿಬಂದವು. ಮಾಣಿಯ ಹೃದಯದಲ್ಲಿ ಅಪಾರ ಯಾತನೆಯಾಯಿತು. ನೀಲನ ಎರಡು ಕೈಗಳನ್ನೂ ಹಿಡಿದು,

"ಈಗ....ಈಗ ನೀನೂ ನನ್ನ ಕೈಬಿಡುವೆಯಾ ನೀಲಾ? ದುಃಖದಲ್ಲಿ ಮಗು 'ಅಮ್ಮಾ....ಅಮ್ಮಾ....' ಎನ್ನುವಂತೆ ದುಃಖದಲ್ಲಿ ನಾನು 'ನೀಲಾ.... ನೀಲಾ' ಎನ್ನುವೆ."

ಮಾತು ಬರದೆ ನೀಲಾ ಸುಮ್ಮನೆ ಕಣ್ಣೀರು ಸುರಿಸುತ್ತಿದ್ದ.

"ನಾನು ಮಹಾಪರಾಧಿ ನೀಲಾ! ಜೀವನದ ಬೆಳೆಯನ್ನು ಕಾಣದೆ ಹೋದೆ—ಪ್ರೇಮದ ಪಾವಿತ್ರ್ಯವನ್ನರಿಯದೆ ಹೋದೆ—ಚಾರುವಿನಂತಹ

ದೇವತೆಯನ್ನು ನನ್ನ ನೀಚ ನಡತೆಗೆ ಬಲಿಗೊಟ್ಟೆ. ಗುರುವನ್ನು ತಿರಸ್ಕರಿಸಿ ಬಂದುದಕ್ಕೆ ಇದು ಶಿಕ್ಷೆಯೆಂದು ಕಾಣುತ್ತದೆ.''

ತನ್ನ ದುಃಖವನ್ನಡಗಿಸಿಕೊಂಡು ನೀಲಾ ಮಾಣಿಯನ್ನು ಸೇವರಿಸುತ್ತ "ನಿನ್ನ ಗುರು ದೇವರ ಸಮಾನ ಮಾಣಿ. ಅವರು ಎಂದಿಗೂ ನಿನ್ನ ಶ್ರೇಯವನ್ನೇ ಕೋರುತ್ತಾರೆ. ಅವರ ಪ್ರೇಮ ನಿನ್ನ ರಕ್ಷಣೆಗೆಂದೂ ನಿಂತಿರುತ್ತದೆ. ಇಷ್ಟು ನಿರ್ವಿಣ್ಣನಾದರೆ ಹೇಗೆ ಹೇಳು. ಎಲ್ಲರೂ ಎಡವುತ್ತೇವೆ. ಎಲ್ಲರೂ ತಪ್ಪಿ ನಡೆಯುತ್ತೇವೆ. ಜೀವನದ ಧ್ಯೇಯದಿಂದ ವಿಮುಖರಾಗಿ ಹೇಯಸುಖಗಳಲ್ಲಿ ಮಗ್ನರಾಗಿರುತ್ತೇವೆ. ಆದರೆ ಕಲೆಯ ಉಪಾಸನೆಗೆ ಕಷ್ಟ—ಸುಖಗಳೆರಡೂ ಬೇಕು. ನೀನು ಎರಡನ್ನೂ ಬೇಕಾದಹಾಗೆ ಅನುಭವಿಸಿ ಮುಕ್ತಿ ಹೊಂದಿದ್ದೀಯೆ. ಇನ್ನು ನೀನು ಕನಸುಕಾಣುತ್ತಿದ್ದ ಕಲಾಸೌಧವನ್ನು ಕಟ್ಟು. ಜಗನ್ಮಾತೆ ಶಕ್ತಿಯನ್ನು ನೀಡುತ್ತಾಳೆ..........ಈ ಜಾಗವನ್ನು ಮೊದಲು ಬಿಡು. 'ಮಧುಗುಪ್ತ ಬೀದಿ'ಯಲ್ಲಿ ಒಂದು ಮನೆ ನಿನಗೆ ಗೊತ್ತುಮಾಡಿ ಬಂದಿದ್ದೇನೆ.......... ಮೂರು ತಿಂಗಳ ಬಾಡಿಗೆ ಮೊದಲೆ ಕೊಟ್ಟದ್ದಾಗಿದೆ. ಅಲ್ಲಿ ಇದ್ದು ನಿನ್ನ ಕಲಾಸೇವೆಯನ್ನು ಮತ್ತೆ ಆರಂಭಿಸಿ.........."

ಮುಂದೆ ಹೇಳಲಾರದಾದ. ಗಂಟಲು ಬಿಗಿದುಬಂದಿತು. ಮನೆಯ ವಿಳಾಸವನ್ನು ಒಂದು ಕಾಗದದ ಮೇಲೆ ಗುರುತುಹಾಕಿ, ಅದನ್ನು ಬೀಗದ ಕೈಯೊಂದಿಗಿತ್ತ. ನೀಲನ ಈ ಮಹದುಪಕಾರ ಮಾಣಿಯನ್ನು ಸ್ತಂಭಿತನನ್ನಾಗಿ ಮಾಡಿತು. ಕ್ಷಮೆ—ಪ್ರೇಮ—ತ್ಯಾಗದ ಆ ಮೂರ್ತಿಯನ್ನು ನೋಡುತ್ತಾ ಹಾಗೆಯೇ ಅವನನ್ನು ಅಪ್ಪಿದ. ಆ ಸರಳವಾದ, ಪವಿತ್ರ ಗೆಳತನದ ಆಲಿಂಗನ ಅವನ ಬಾಳಿಗೆ ಹೊಸ ಶಕ್ತಿಯನ್ನೂ ಬೆಳಕನ್ನೂ ಇತ್ತಿತು.

## ೨೦

ಆನಂದಮಯಿಯ ಜೀವನವು ಸುಖಜೀವನವೆಂದೆನಿಸಿಕೊಂಡಿರಲಿಲ್ಲ. ಪತಿವಿಯೋಗವಾಗುವಾಗ್ಗೆ ಉಷಾ ಆರು ತಿಂಗಳ ಮಗು. ಮೈದುನನ ಕೈಗೆ ಸಿಕ್ಕಿ ನೊಂದು ಆಸ್ತಿಯೆಲ್ಲವನ್ನೂ ನೀಗಿಕೊಂಡಿದ್ದಳು. ಅವಳದಾಗಿ

ಉಳಿದುದು ಮಧುಗುಪ್ತ ಬೀದಿಯಲ್ಲಿನ ಮನೆ ಮತ್ತು ಉಷಾಬಾಲಾ. ಮಗುವನ್ನು ಬೆಳೆಸಿ ದೊಡ್ಡದು ಮಾಡಿ ತಾನು ಒಂದೆರಡು ಕೋಣೆಗಳನ್ನು ಮಾತ್ರವೇ ಇಟ್ಟುಕೊಂಡು, ಬರುತ್ತಿದ್ದ ೨೫ ರೂಪಾಯಿಗಳ ಬಾಡಿಗೆಯಲ್ಲಿ ಜೀವನಯಾತ್ರೆ ಸಾಗಿಸಿದ್ದಳು.

ಆನಂದಮಯಿಯ ಜೀವನಕ್ಕೆ ಉಷೆ ಉಷಸ್ಸೇ ಆಗಿದ್ದಳು. ಮನೆಯಲ್ಲಿ ಹೇಗೆ ತಾಯಿಗೆ ಅಚ್ಚುಮೆಚ್ಚೋ ಹಾಗೇ ಶಾಲೆಯಲ್ಲಿಯೂ ಅಧ್ಯಾಪಕರ ಪರಮ ಪ್ರೀತಿಗೆ ಪಾತ್ರಳಾಗಿದ್ದಳು. ಎಷ್ಟೋ ಬಾರಿ ಅಧ್ಯಾಪಿಕೆಯರು ಉಷೆಯನ್ನು ಇತರ ಬಾಲಿಕೆಯರಿಗೆ ಆದರ್ಶವಾಗಿ ತೋರಿಸಿ ಅವರ ಆಗ್ರಹಕ್ಕೆ ತುತ್ತಾಗಿಯೂ ಇದ್ದರು. ವಿದ್ಯೆಯ ಮೇಲಿದ್ದ ಆಸಕ್ತಿ ಅವಳಿಗೆ ಕಾಲಕ್ಷೇಪವನ್ನು ಒದಗಿಸಿಕೊಟ್ಟು ವ್ಯಾಸಂಗವನ್ನು ಸುಲಭವಾಗಿ ಪೂರೈಸಲು ಅನುಕೂಲಪಡಿಸಿಕೊಟ್ಟಿತು. ಮಗಳು ಬಿ.ಎ. ಪಾಸು ಮಾಡಿ ಯಾವದಾದರೂ ಕೆಲಸಕ್ಕೆ ಸೇರಬೇಕೆಂದು ತಾಯಿಯ ಇಚ್ಛೆ. ಅದನ್ನು ಪೂರ್ಣಗೊಳಿಸಲು ಉಷೆ ವಿಶೇಷ ಶ್ರಮಪಡು ತ್ತಿದ್ದಳು.

ಉಷೆಗೆ 'ಕೋಕಿಲಾ' ಎಂಬ ಅಡ್ಡಹೆಸರು ಶಾಲೆಯಲ್ಲಿದ್ದುದು ತಾಯಿಗೆ ಗೊತ್ತಿರಲಿಲ್ಲ. ಅದನ್ನು ತಿಳಿಸುವುದಕ್ಕೆ ನಾಚಿಕೆ, ಉಷೆಯನ್ನು ತಡೆದಿತ್ತು. ಮಗಳು ಹಾಡುವುದನ್ನೊಮ್ಮೊಮ್ಮೆ ಕೇಳಿ ಆನಂದಮಯಿಯೇ ಆಶ್ಚರ್ಯದಿಂದ

"ಉಷಾ, ಎಲ್ಲಿ ಕಲಿತೆಯೇ ಇಷ್ಟೊಂದು ಸಂಗೀತ?" ಎಂದು ಕೇಳಿದರೆ ಸರಳವಾಗಿ ಉಷಾ

"ನಮ್ಮ ಮೇಡಂ—ಗೆ ನನ್ನ ಮೇಲೆ ತುಂಬಾ ಪ್ರೀತಿಯಮ್ಮ. ಮನಸ್ಸಿಟ್ಟು ಹಾಡು ಹೇಳಿಕೊಡುತ್ತಾರೆ" ಎಂದು ಹೇಳಿಬಿಡುವಳು. ಉಷೆಯ ಬಾಲ್ಯ ಕೇವಲ ಕಾವ್ಯಮಯವಾಗಿತ್ತು. ವಿದ್ಯಾಪತಿ, ಚಂಡಿ ದಾಸ್, ಜಯದೇವರ ಗೀತೆಗಳನ್ನು ಹಾಡುತ್ತ ಮನೆಯ ಮುಂದೆ ಮುದ್ದಿನಿಂದ ಬೆಳಸಿ ಸಾಕಿಕೊಂಡಿದ್ದ ಗುಲಾಬಿ, ಮಲ್ಲಿಕಾ, ಜಾಜಿ, ಸುಗಂಧರಾಜ ಗಿಡಗಳಿಗೆ ನೀರೆರೆಯುವಳು. ಸದಾ ತನ್ನನ್ನು ಹರಟೆಗೆ ಕರೆಯುತ್ತಿದ್ದ ಶುಕದಂಪತಿಗಳನ್ನು ಕಪಟಕೋಪದಿಂದ ದಂಡಿಸಿ ಮುಂದೆ ಹೋಗುವಳು.

ಮನೆಯನ್ನು ಸಿಂಗರಿಸಿ, ಮುಂದೆ ನೀರಿನಿಂದ ತೊಳೆದು ಬಗೆಬಗೆಯ ಬಣ್ಣದ ರಂಗವಲ್ಲಿಯ ಹಸೆಗಳನ್ನಿಡುವುದಕ್ಕಂತೂ ಅವಳಿಗೆ ತುಂಬಾ ಪ್ರೀತಿ. ಹೂವು, ಗಿಡ, ಬಳ್ಳಿ, ಹಕ್ಕಿಗಳಲ್ಲಿ ಅವಳು ತೋರುತ್ತಿದ್ದ ಪ್ರೇಮವನ್ನು ತಾಯಿ ಮೆಚ್ಚುತ್ತ ಒಮ್ಮೊಮ್ಮೆ

"ಉಷಾ, ಹೂವು ಹಕ್ಕಿಗಳಲ್ಲೇ ಇಷ್ಟು ಪ್ರೀತಿಯನ್ನು ತೋರಿಸುತ್ತಿರುವೆ. ನಾಳೆ ನಿನಗೆ ಮದುವೆಯಾಗಿ ಮಕ್ಕಳಾದರೆ ಗಂಡನನ್ನೂ ಮಕ್ಕಳನ್ನೂ ಕುತ್ತಿಗೆಗೇ ಕಟ್ಟಿಕೊಂಡು ತಿರುಗಾಡುವಿಯೇನೋಮ್ಮ"

ಎಂದು ನಗೆಯಾಡಿದರೆ, ಸುಳ್ಳುಕೋಪವನ್ನು ತೋರುತ್ತ "ಎಷ್ಟು ಕೆಟ್ಟವಳೇ ಅಮ್ಮಾನೀನು........"ಎನ್ನುತ್ತ ತಾಯಿಯ ಕೆನ್ನೆಯನ್ನು ಕಚ್ಚಿಬಿಡುವಳು. ಈ ಮುದ್ದು ಹಕ್ಕಿಯ ಆಟಪಾಟವನ್ನು ನೋಡುತ್ತ ಆನಂದಮಯಿ ತನ್ನ ದುಃಖವನ್ನೆಲ್ಲಾ ಮರೆತುಬಿಡುವಳು.

ಈಕೆಯ ಮನೆಯ ಮಹಡಿಯನ್ನೇ ನೀಲರಂಜನ ಮಾಣಿಗೆ ಗೊತ್ತುಮಾಡಿದ್ದುದು. ದಿನಗಟ್ಟಳೆ ಕೊಠಡಿಯನ್ನು ಬಿಟ್ಟು ಮಾಣಿ ಹೊರಬರುತ್ತಿರಲೇ ಇರಲಿಲ್ಲ. ಮನಸ್ಸು ಬಂದರೆ ಎಲ್ಲಿಯಾದರೂ ಹೋಟಲಿಗೆ ಊಟಕ್ಕೆ ಹೋಗುವನು...........ಇಲ್ಲವಾದರೆ ಸಿಗರೇಟುಗಳನ್ನು ಸುಡುತ್ತ ಹಸಿವನ್ನು ಹೊಸ್ತಿಲಿನಿಂದ ದೂಡಿಬಿಡುವನು.

ಒಮ್ಮೊಮ್ಮೆ ಮಹಡಿಯಿಂದ ಕರುಳು ಕುಕ್ಕುವಂತೆ ದೀರ್ಘವಾದ ಆಳವಾದ ದನಿಯಲ್ಲಿ ಬರುತ್ತಿದ್ದ ಅಸಾವೇರಿ, ವಸಂತರಾಗಗಳನ್ನು ಕೇಳಿ ತಾಯಿ ಮಗಳಿಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುವರು. ತಮ್ಮಲ್ಲಿ ಒಕ್ಕಲಾಗಿದ್ದ ಪ್ರಾಣಿ ಸಾಮಾನ್ಯನಲ್ಲವೆಂದೂ....ಅಪಾರ ದುಃಖದಿಂದ ತಪಿಸುತ್ತಿರುವನೆಂದೂ ಇಬ್ಬರೂ ಬಲ್ಲರು. ಆದರೆ ಅವನ ಬಳಿಗೆ ಹೋಗಿ ವಿಚಾರಿಸಲು ಇಬ್ಬರಿಗೂ ಧೈರ್ಯವಿಲ್ಲ.

"ಅಮ್ಮ ಅವರು ಯಾರೇ?" ಎಂದು ಉಷೆ ಒಂದು ದಿವಸ ತಾಯಿಯನ್ನು ಕೇಳಿದಳು.

"ನಾನು ಕಾಣೆನಮ್ಮ. ಮೊನ್ನೆ ಕೆಲವು ಕುಂಚಗಳನ್ನು ತೊಳೆಯುತ್ತಿದ್ದುದನ್ನು ಕಂಡೆ. ಚಿತ್ರಕಾರರಿರಬಹುದು ಎಂದುಕೊಂಡೆ."

"ಒಬ್ಬರೇ ಹೇಗಿದ್ದಾರಮ್ಮ? ಎಷ್ಟು ಕಷ್ಟ?"

"ಅಹುದು ಉಷಾ. ಶಾಲೆಗೆ ಹೊತ್ತಾಗುವುದು ಊಟ ಮಾಡು ನಡೆ" ಎಂದು ಮಗಳನ್ನು ಕರೆದೊಯ್ದಳು. ಉಷಾ ಭೋಜನ ತೀರಿಸಿ ಪುಸ್ತಕಗಳನ್ನು ಹಿಡಿದು ಹೊರಗೆ ಬರುವ ಹೊತ್ತಿಗೆ ಮಾಣಿ ಗುಲಾಬಿ ಗಿಡದಿಂದ ಒಂದು ಹೂವನ್ನು ಕಿತ್ತುಕೊಂಡು ಇನ್ನೊಂದನ್ನು ಹುಡುಕುತ್ತಿದ್ದುದನ್ನು ಕಂಡಳು. ಕಳ್ಳತನ ಪತ್ತೆಯಾದುದನ್ನು ನೋಡಿ ನಾಚುತ್ತ

"ಕೇಳದೆ ಹೂವನ್ನು ತೆಗೆದುಕೊಂಡದ್ದಕ್ಕೆ ಕ್ಷಮಿಸಬೇಕು."

"ತೆಗೆದುಕೊಳ್ಳಿ. ಅದಕ್ಕೇನು ಗಿಡದಲ್ಲಿ ಬೇಕಾದಷ್ಟು ಹೂವುಗಳಿವೆ."

"ನಾನು ಕೇಳದೆ ತೆಗೆದುಕೊಳ್ಳುತ್ತಿರಲಿಲ್ಲ....ಆದರೆ ಇಂದು ಬೇಕೇ ಬೇಕಾಯಿತು.... ನೋಡಿ...."

"ಹೇಳಿ. ಸಂಕೋಚವೇತಕ್ಕೆ ?"

"ಹೂವಿನ ಚಿತ್ರ ಬರೆಯಬೇಕೆನಿಸಿತು. ಅದಕ್ಕೋಸುಗ ಈ ಕಳ್ಳತನ."

"ಈ ಹೂವಿನ ಚಿತ್ರ ಬರೆಯುವಿರಾ ?"

"ಹೌದು ಬರೆಯಬೇಕೆಂದಿರುವೆ."

"ಯಾವಾಗ ಮುಗಿಯಬಹುದು."

"ಇವತ್ತೇ–ಪ್ರಾಯಶಃ ಸಂಜೆಯ ಒಳಗಾಗಿ."

"ನನಗೆ ಅದನ್ನು ತೋರಿಸುವುದಾದರೆ ಹೂವನ್ನು ಕೇಳದೆ ತೆಗೆದುಕೊಂಡ ತಪ್ಪನ್ನು ಕ್ಷಮಿಸುತ್ತೇನೆ" ಎಂದು ನಗುತ್ತ ನುಡಿದಳು. ಮಾಣಿ ನಗುತ್ತ 'ಆಗಲಿ' ಎಂದು ನುಡಿದ. ಶಾಲೆಗೆ ಹೊತ್ತಾಯಿತೆಂದುಕೊಂಡು ಉಷಾ ಓಡಿಹೋದಳು. ಅಂದು ಗುಲಾಬಿಯ ಚಿತ್ರವನ್ನು ಮುಗಿಸಿಯೇ ಬಿಡಬೇಕೆಂದು ಶಪಥಮಾಡಿಕೊಂಡು ಮಾಣಿ ಕೊಠಡಿಯ ಬಾಗಿಲು ಹಾಕಿಕೊಂಡು ಕುಳಿತ.

ಮಧ್ಯಾಹ್ನ ಕಳೆದು ಸಂಜೆ ಬಂದಿತು. ಚಿತ್ರವನ್ನು ನೋಡುತ್ತ ಅಲ್ಲಿ ಇಲ್ಲಿ ಒಂದೊಂದು ಭಾಗವನ್ನು ತಿದ್ದುತ್ತ ಮಾಣಿ ಮೈಮರೆತುಬಿಟ್ಟಿದ್ದ. ಚಿತ್ರದ ಪಕ್ಕದಲ್ಲಿ ಮೇಜಿನ ಮೇಲೆ ಬೆಳಿಗ್ಗೆ ಗಿಡದಿಂದ ಕಿತ್ತು ತಂದ ಹೂವು ಒಣಗಿ, ತನ್ನ ಲಲಿತ ಗುಲಾಬಿ ವರ್ಣವನ್ನು ನೀಗಿಕೊಳ್ಳುತ್ತ ಬೂದಿ ಬಣ್ಣ ಪಡೆದು ಕ್ಷಯಿಸುತ್ತಿತ್ತು. ಚಿತ್ರ ನವೋತ್ಸಾಹದಿಂದ ಕಳೆದುಂಬಿ ಲಾವಣ್ಯದ ಬಿಂಕದಿಂದ ಮದಿಸಿ ಕುಳಿತಿತ್ತು. ಕಲಾವಿದನ

ಶಕ್ತಿ ಈ ತುಲನೆಯಿಂದ ಮಾಣಿಯ ಮನಸ್ಸಿನಲ್ಲಿ ಅಚ್ಚೊತ್ತಿತು. ದೇವರು ಮಾಡಲಾಗದುದನ್ನು ಕಲಾವಿದ ಮಾಡಬಲ್ಲ; ಎಲ್ಲಿ ದೇವರ ಕೃತಿ ಮುಗಿಯುವುದೋ ಅಲ್ಲಿ ಕಲಾವಿದನ ಕರ್ತವ್ಯ ಆರಂಭವಾಗುವುದು ಎಂದು ತನ್ನಲ್ಲಿಯೇ ನುಡಿದುಕೊಂಡ. ಬಾಗಿಲು ತಟ್ಟಿದ ಸದ್ದು ಕೇಳಬಂದಿತು. ಯಾರಿರಬಹುದೆಂದು ಆಶ್ಚರ್ಯದಿಂದ ಬಾಗಿಲು ತೆರೆದು ನೋಡಿದ. ಉಷಾ ಕೈಯಲ್ಲಿ ಉಪಾಹಾರ, ಟೀಗಳನ್ನು ಹಿಡಿದು ನಿಂತಿದ್ದಳು.

"ಯಾರಿಗಿದು ತಂಗೀ ?"

"ನನ್ನ ಗುಲಾಬಿಯನ್ನು ಕದ್ದ ಕಳ್ಳನಿಗೆ."

"ನಿಮ್ಮ ಕಳ್ಳನಿಗೆ ಇದು ಶಿಕ್ಷೆಯೋ ?"

"ಹೂ-ಹೂ" ಎಂದು ಉಷಾ ತಲೆದೂಗಿ ಅವುಗಳನ್ನು ಮೇಜಿನ ಮೇಲಿಟ್ಟು

"ಮೊದಲು ಇದನ್ನು ಮುಗಿಸಿದರೇ ನಾನು ಚಿತ್ರ ನೋಡುವುದು."

"ಇಷ್ಟು ನನಗೇನೆ ?....ನಿಮಗೆ ?"

"ನನಗಾಯಿತು. ತೆಗೆದುಕೊಳ್ಳಿ" ಎಂದು ಉಪಚಾರದಿಂದ ಬಲವಂತಪಡಿಸಿದಳು. ದುಃಖಾಧಿಕ್ಯದಲ್ಲಿ ಮಾಯವಾಗಿದ್ದ ಹಸಿವು ಮತ್ತೆ ತಲೆದೋರಿತು. ಉಪಾಹಾರ ಚಹ ಮುಗಿಸಿ, ಗುಲಾಬಿಯ ಚಿತ್ರವನ್ನು ಎವೆಯಿಕ್ಕದೆ ನೋಡುತ್ತ ನಿಂತಿದ್ದ ಉಷೆಯನ್ನು ಕುರಿತು

"ಚಿತ್ರಹೇಗಿದೆ ?"

"ಮಹಾಶಯ........"

"ಏನು ತಂಗೀ"

"ನೀವು ಅಸಾಮಾನ್ಯರು....ಸಾಮಾನ್ಯರು ಹೀಗೆ ಎಂದಿಗೂ ಬರೆಯಲಾರರು" ಎಂದು ಉತ್ಸಾಹದಿಂದ ಕೆಳಗೆ ಹೋಗಿ ತಾಯಿಯನ್ನು ಕರೆ ತಂದು ತೋರಿಸಿದಳು. ತಾಯಿ ಮಗಳಿಬ್ಬರೂ ಒಂದೇ ಸಮನೆ ಚಿತ್ರವನ್ನು ದಿಟ್ಟಿಸಿ ನೋಡುತ್ತ ಮಧ್ಯೆ ಮಧ್ಯೆ ಮಾಣಿಯನ್ನು ಕದ್ದು ಕದ್ದು ನೋಡುತ್ತಿದ್ದರು. ಚಿತ್ರವನ್ನು ಅದರ ಹಿಡಿಯಿಂದ ಬಿಡಿಸಿ ಒಂದು ಕಾಗದದಲ್ಲಿ ಸುತ್ತಿ ಉಷೆಯ ಕೈಯಲ್ಲಿಟ್ಟು ಮಾಣಿ

"ತಂಗೀ – ಇದು ನಿನ್ನದು" ಎಂದ. ಆಶ್ಚರ್ಯದಿಂದ ಉಷಾ ತಾಯಿಯ ಮುಖ ನೋಡಿದಳು.

"ಮಾ.... ನಿಮ್ಮ ಮಗಳಿಗೆ ಚಿತ್ರವನ್ನು ಸ್ವೀಕರಿಸಹೇಳಿ. ಅವರ ಉತ್ಸಾಹವಿಲ್ಲದಿದ್ದರೆ.... ಪ್ರೋತ್ಸಾಹವಿಲ್ಲದಿದ್ದರೆ.... ನಾನು ಮತ್ತೆ ಕುಂಚ ವನ್ನೇ ಹಿಡಿಯುತ್ತಿರಲಿಲ್ಲ."

ಸಮಸ್ಯೆ ಗಭೀರವಾಗುತ್ತ ಬಂದಿತು. ಆನಂದಮಯಿ ಮಾಣಿಯ ಮುಖದಲ್ಲಿ ಎದ್ದು ಕಾಣುತ್ತಿದ್ದ ಅಪಾರ ದುಃಖವನ್ನು ಗಮನಿಸಿ

"ನೀವು ಯಾರು ಮಹಾಶಯ ?"

"ಒಬ್ಬ ನಿರ್ಭಾಗ್ಯ ತಾಯಿ. ಎಂದಾದರೊಂದು ದಿವಸ ನನ್ನ ಬಾಳಿನ ದುರಂತ ಕಥೆಯನ್ನು ಹೇಳುವೆನು. ಕೇಳುವ ಸಹನೆ ಮಾತ್ರ ತೋರಿಸಿ"

"ದುರಂತವೆನ್ನಬೇಡಿ ಮಹಾಶಯ. ದೇವರು ದೊಡ್ಡವನು. ಎಲ್ಲಾ ಕಷ್ಟಗಳಿಂದಲೂ ಪಾರುಮಾಡುವನು" ಎಂದು ಹೇಳುತ್ತಿರುವಂತೆ ಕಣ್ಣು ಗಳಿಂದ ಹೊರಟ ದುಃಖಜಲವನ್ನು ನಿವಾರಿಸುತ್ತ

"ಕೋಣೆ ಬಹಳ ಕೊಳಕಾಗಿದೆ. ಸ್ವಲ್ಪ ಕೆಳಗೆ ನಡೆಯಿರಿ ಮಹಾ ಶಯ. ನಾನು ಶುಚಿಮಾಡಿಕೊಡುತ್ತೇನೆ."

"ನೀವೇ ?.... ಬೇಡಿ ಬೇಡಿ...." ಎಂದು ಹೇಳುತ್ತಿದ್ದರೂ ಕೇಳದೆ ಸಾಮಾನುಗಳನ್ನು ಒರಣವಾಗಿಟ್ಟು ಸಿಗರೇಟಿನ ತುಂಡಗಳನ್ನಾಯು ತ್ತಿದ್ದ ಆನಂದಮಯಿಯ ತಾಯಿಕರುಳನ್ನು ನೋಡಿ ಆಶ್ಚರ್ಯಚಕಿತ ನಾದ.

ಸ್ವಲ್ಪ ಹೊತ್ತು ಬಿಟ್ಟು ಬರುವ ವೇಳೆಗೆ ಕೋಣೆ ಶುಭ್ರವಾದುದ ಲ್ಲದೆ ತನ್ನ ಸಾಮಾನುಗಳು ಅಂದವಾಗಿ ಇಡಲ್ಪಟ್ಟಿದ್ದವು. ಅಂದಿನ ವಾತಾ ವರಣ ಮನಸ್ಸಿಗೆ ಹೊಸ ಹುರುಪನ್ನಿತ್ತಿದ್ದಿತು. ಚಿತ್ರದ ಕಟ್ಟಿಗೆ ಒಂದು ವೇಶ್ಮವನ್ನು ಕಟ್ಟಿ ಬಣ್ಣಗಳನ್ನು ಕಲಸಿಕೊಂಡು ಕೆಲಸಕ್ಕೆ ಆರಂಭಿಸಿದ. ಕುಂಚ ಓಡುತ್ತಿದ್ದ ವೇಗ, ಮನಸ್ಸಿನಲ್ಲೇಳುತ್ತಿದ್ದ ಹೊಸ ಹೊಸ ಭಾವ ಗಳು ಅವನನ್ನು ಆನಂದ ಸಾಮ್ರಾಜ್ಯದ ಸಮ್ರಾಟನನ್ನಾಗಿಸಿದವು.

"ನಾನು ಕೆಟ್ಟಿಲ್ಲ. ಉಳಿದೆ. ಉದ್ಧಾರವಾದೆ. ಕಲೆ ನನ್ನ

ಕೈ ಬಿಟ್ಟಿಲ್ಲ” ಎಂದು ಆನಂದೋನ್ಮಾದದಿಂದ ಕೂಗಿ, ಉದ್ವೇಗದಿಂದ ಚಿತ್ರವನ್ನು ರಚಿಸಲಾರಂಭಿಸಿದ.

ಮೊದಲಿನ ಒತ್ತಟ್ಟಿಗಿರುವಿಕೆ ಕ್ರಮಕ್ರಮೇಣ ಹೋಗುತ್ತ ಬಂದು ಐದು . ಆರು ತಿಂಗಳಲ್ಲಿ ಮಾಣಿ ಆನಂದಮಯಿಯ ಮನೆಯವನೇ ಆಗಿ ಹೋದ. ತನ್ನ ಮುದ್ದು ಮೈಸೂರನ್ನು....ತನ್ನ ಮೂವರು ಭಾಗ್ಯ ಬಂಧುಗಳನ್ನು ಎಷ್ಟು ವರ್ಣಿಸಿದರೂ ಅವನಿಗೆ ತೃಪ್ತಿಯೇಇಲ್ಲ. ಹಳೆಯ ನೆನಪು ಬಂದಾಗಲೆಲ್ಲಾ ‘ಎಂದಿಗೆ ಮೈಸೂರಿಗೆ ಹೋದೇನು ?’ ಎಂಬ ಕೂತೂಹಲ ಅವನನ್ನು ಕೊರೆಯತೊಡಗಿತು. ಮರುಕ್ಷಣವೇ ‘ಕಾಲ ಸಮೀಪಿಸಿಲ್ಲ; ಕಾಲ ಸಮೀಪಿಸಿಲ್ಲ’ ಎಂದು ಎಚ್ಚರಿಕೆ ಕೊಡುತ್ತಿದ್ದ ಸಂದೇಶಕ್ಕೆ ತಲೆಬಾಗಿ ಸುಮ್ಮನಾಗುತ್ತಿದ್ದ.

ಮಾಣಿಯ ಪೂರ್ವವೃತ್ತಾಂತವನ್ನು ಕೇಳಿ ಆನಂದಮಯಿಯ ಪ್ರೇಮ ಎಲ್ಲೆಯಿಲ್ಲದಂತೆ ವಿಸ್ತರಿಸಿತು. ದುಃಖದ ವಿಶ್ವಾಕಾರವನ್ನು ಕಂಡಿದ್ದ ಆ ತಾಯಿ ದಯೆ, ಕ್ಷಮೆಗಳ ಮೂರ್ತಿಯಾಗಿದ್ದಳು. ಮುಚ್ಚು ಮರೆಯಿಲ್ಲದೆ ತನ್ನ ತಪ್ಪುಗಳನ್ನೊಪ್ಪಿಕೊಂಡ ಔದಾರ್ಯ ಉಷೆಯ ಮನಸ್ಸಿನಲ್ಲಿ ತುಂಬಾ ಪರಿಣಾಮವನ್ನುಂಟುಮಾಡಿ ಮಾಣಿಯ ಬಗ್ಗೆ ಗೌರವವನ್ನು ಹೆಚ್ಚಿಸಿತ್ತು.

ನೀಲನಿಂದ ಕಾಗದ ಬರದಿದ್ದುದು ಮಾಣಿಗೆ ತಳಮಳವನ್ನುಂಟುಮಾಡಿತ್ತು. ಅಂದಿನವರೆಗೆ ತಾನು ರಚಿಸಿದ್ದ ೧೦ ಸುಂದರ ಚಿತ್ರಗಳನ್ನು ನೀಲನಿಗೆ ಕಾಣಿಕೆಯಾಗಿ ಅರ್ಪಿಸಿ ಕಳುಹಿಸಿದ್ದ. ಮುಂದೆ ತಾನು ಏನೇ ರಚಿಸಿದರೂ ಅದು ನೀಲನದೆಂದು ನಿರ್ಧರಿಸಿಬಿಟ್ಟಿದ್ದ. ಯೋಚಿಸುತ್ತ ಕುಳಿತಿದ್ದ ಮಾಣಿಯ ಕೈಗೆ ಉಷಾ ಒಂದು ದೊಡ್ಡ ಪ್ಯಾಕೆಟ್ಟನ್ನು ತಂದಿತ್ತು ಅಂಚೆಯ ರಶೀತಿಗೆ ಸಹಿ ಪಡೆದು ಹೋದಳು. ನೀಲನ ಅಕ್ಷರ ನೋಡಿ ಹಿಗ್ಗಿನಿಂದ ಕುಣಿಯಲಾರಂಭಿಸಿದ. ಒಡೆದು ನೋಡಿದ........ಕಣ್ಮನಗಳನ್ನು ತಣಿಸುವ ದೃಶ್ಯ........ನೀಲನ ಚಿತ್ರಗಳ ಸಂಗ್ರಹ. ಸುಪ್ರಸಿದ್ಧ ಕಲಾ ವಿಮರ್ಶಕರಾದ ಆನಂದಕುಮಾರಸ್ವಾಮಿಯವರ ಮುನ್ನುಡಿಯೊಂದಿಗೆ. ಪುಸ್ತಕವನ್ನು ಅವಸರದಿಂದ ತಿರುವಿಹಾಕುತ್ತಾ ಅದರ ಕೊನೆಯಲ್ಲಿದ್ದ ಜಾಹಿರಾತು ಅವನ ಗಮನವನ್ನು ಸೆಳೆಯಿತು. ಅದರ ಅರ್ಥ

ಸರಿಯಾಗಿ ಮಾಣಿಗೆ ಹೊಳೆಯಲಿಲ್ಲ. ಗ್ರಂಥದೊಂದಿಗೆ ಬಂದ ನೀಲನ ಕಾಗದವನ್ನು ಬಿಚ್ಚಿ ಆತುರದಿಂದ ಓದತೊಡಗಿದ.

ಕಲಾಭವನ, ಬಡೋದಾ.

"ಪ್ರಿಯ ಆತ್ಮಾ,

ನಿನ್ನ ಕಾಗದ ಮತ್ತು ಚಿತ್ರಗಳು ಸೇರಿದವು. ನನ್ನ ಗ್ರಂಥ ಬರಲೆಂದು ಮಾರುತ್ತರ ಬರಯಲು ವಿಳಂಬ ಮಾಡಿದೆ. ನಿನ್ನ ಕೃತಿ ನನ್ನದು ಹೇಗೋ ನನ್ನ ಕೃತಿ ಹಾಗೆಯೇ ನಿನ್ನದು! ನಿನ್ನ ಅಪ್ಪಣೆ ಪಡೆಯದೆ ಮುಂದಿನ ಪ್ರಕಟಣೆ ನಿನ್ನ ಚಿತ್ರಗಳ ಸಂಗ್ರಹವೆಂದು ಹಾಕಿಸಿರುವೆ. ಒಟ್ಟು ೩೪ ಚಿತ್ರಗಳಾದರೂ ಬೇಕು. ಇನ್ನು ೧೪ ಬೇಗ ಕಳುಹಿಸುವಿಯಷ್ಟೆ! ನಿನ್ನ 'ಶಾಮಸುಂದರ' ನನ್ನ ಮರೆಯದೆ ಕಳುಹಿಸು. ಇನ್ನೊಂದು ಸುದ್ದಿ. ನಿನ್ನ ಸಂಗ್ರಹಕ್ಕೆ ಮುನ್ನುಡಿ ಬರೆಯುವವರು ಯಾರು ಗೊತ್ತೇ? ನಿನ್ನನ್ನು ಬೆಳಕಿಗೆ ತಂದ ಗಂಗೂಲಿಯವರು! ಎಂತಹ ದೊಡ್ಡ ಮನಸ್ಸು ಅವರದು—ನಿನ್ನ ಹೆಸರು ಹೇಳಿ ಮುನ್ನುಡಿಯನ್ನು ಕೋರಿದೊಡನೆಯೇ 'ಆಗಲಿ' ಎಂದರು.

ನಿನ್ನ ಹೊಸ ತಾಯಿ, ತಂಗಿಯರಿಗೆ ನನ್ನ ನಮಸ್ಕಾರ ಹೇಳು. ಬಡೋದೆಗೆ ಯಾವಾಗ ಬರುವೆ? ನಿನ್ನ ಜೀವನದ ವಿಚಾರ ಅಷ್ಟೊಂದು ಕ್ಷಮೆಯನ್ನೇತಕ್ಕೆ ಬರೆದುಕೊಂಡಿರುವೆ? ನಿನ್ನ ಚಿತ್ರಗಳೇ ಸಾಲದೆ ಕತೆ ಹೇಳುವುದಕ್ಕೆ? ನೀನು ದೊಡ್ಡವನು ಮಾಣಿ! ಭಾರತಕ್ಕೆ ಕೀರ್ತಿ ತರುವ ಕಲಾವಿದ! ಜಗನ್ಮಾತೆ ಆಯುಸ್ಸನ್ನು ನೀಡಿ ನಿನ್ನನ್ನು ಕಾಪಾಡಲಿ.

ನಿನ್ನ ನಲ್ಮೆಯ—**ನೀಲಾ.**"

ಉಷೆಯನ್ನು ಕರೆದು ಅವಳ ಕೈಯಲ್ಲಿ ಪತ್ರ, ಗ್ರಂಥಗಳನ್ನಿಟ್ಟ. ಸಂತೋಷದ ಸುದ್ದಿಯನ್ನು ತಾಯಿಗೆ ತಿಳಿಸಿಬರಲು ಅವಳು ಆತುರದಿಂದ ಓಡಿದಳು.

ತನ್ನ ಸಂತೋಷದಲ್ಲಿ ಹೀಗೆ ಸುಖಿಸುವ, ದುಃಖದಲ್ಲಿ ಮರುಗುವ ಈ ಎರಡು ಜೀವಗಳನ್ನು ನೋಡಿ ಮಾಣಿಗೆ ಆಶ್ಚರ್ಯವಾಯಿತು.

ಎಲ್ಲಿಂದ ಎಲ್ಲಿಗೋ ಹೋಗಿ ತುಮರುತುಮರಾದ ತನ್ನ ಜೀವನದ ಹಡಗು ಇಲ್ಲಿ ಒಂದುಗೂಡುವುದೆಂದು ಕನಸು ಮನಸಿನಲ್ಲಿಯೂ ಅವನು ಭಾವಿಸಿ ರಲಿಲ್ಲ. ಉಷೆಯ ಸಹವಾಸದಲ್ಲಿ ದಿವಸಗಳನ್ನು ಕ್ಷಣಗಳಂತೆ ಕಳೆಯಲಾ ರಂಭಿಸಿದ್ದ. ಅವಳು ತನ್ನೆದುರು ಕುಳಿತಿರದಿದ್ದರೆ ಅವನಿಗೆ ಕೆಲಸ ಮಾಡುವ ಉತ್ಸಾಹವೇ ಇರುತ್ತಿರಲಿಲ್ಲ. ಒಮ್ಮೊಮ್ಮೆ ಈ ದೌರ್ಬಲ್ಯ ವನ್ನು ಕಂಡು ಉಷಾ ನಗುತ್ತಾ ದಂಡಿಸುವಳು. ಮಾಣಿ ಆ ದೋಷ ವನ್ನು ಅವಳ ಮೇಲೆಯೇ ಹಾಕಿ ನಿರ್ಲಿಪ್ತನಾಗಿಬಿಡುತ್ತಿದ್ದ.

ನೀಲ ಕೋರಿದ್ದ ಚಿತ್ರಗಳನ್ನು ವಿರಚಿಸುವುದರಲ್ಲಿ ಮಾಣಿಯ ಹೊತ್ತು ಸುಲಭವಾಗಿ ಕಳೆದುಹೋಗುತ್ತಿತ್ತು. ಕೊನೆಯ ಚಿತ್ರವಾಗಿ 'ಉದಯರಾಗ'ವನ್ನು ರಚಿಸಬೇಕೆಂದು ಮನಸ್ಸು ಮಾಡಿಕೊಂಡಿದ್ದ. ಒಂದು ದಿನ ಉಷೆಯೊಂದಿಗೆ ಮಾತನಾಡುತ್ತ ಕುಳಿತಿದ್ದಾಗ ಮಾತು ಬಂದು ತನ್ನ ಚಿತ್ರಗಳ ಭಾವಸಾಮರಸ್ಯವನ್ನು ವರ್ಣಿಸತೊಡಗಿದ. ಆದರೆ 'ಉದಯರಾಗ'ದ ಉದ್ದೇಶವನ್ನರುಹಲು ಹಿಂಜರಿದ. ಉಷಾ ಹುಸಿಮುನಿಸನ್ನು ತೋರುತ್ತ

"ಅದನ್ನು ಹೇಳದಿದ್ದರೆ ಮಿಕ್ಕವುಗಳನ್ನು ಏತಕ್ಕೆ ಹೇಳಬೇಕಾಗಿತ್ತು ?"

"ಹಾಗಾದರೆ ಹೇಳಲೇಬೇಕೇನು ?"

"ನನ್ನ ಬಲವಂತಕ್ಕೆ ಹೇಳುವುದಾದರೆ ಬೇಕಿಲ್ಲ. ನಿಮಗೆ ಸಂತೋಷ ವಿದ್ದರೆ ಹೇಳಬಹುದು."

"ನಾನು ಸಂತೋಷದಿಂದ ಹೇಳಬೇಕಾದರೆ ನೀನು ಒಂದು ಕೆಲಸ ಮಾಡಬೇಕಾಗುತ್ತದೆ."

"ಮಾಡುತ್ತೇನೆ ಹೇಳಿ."

"ಉದಯರಾಗ'ವೆಂದರೆ ವಸಂತಋತುವಿನ ಒಂದು ಚಿತ್ರ. ವನ ಪ್ರದೇಶದ ಒಂದು ದೃಶ್ಯ. ಗಿಡಮರಗಳು ಪೂತು ಫಲಸಿವೆ. ಒಂದು ಕಡೆ ಕೆಲವು ಮಯೂರಗಳ ನಾಟ್ಯ; ಮತ್ತೊಂದು ಕಡೆ ಎಳೆಹಕ್ಕಿಗಳ ಸರಸಸಲ್ಲಾಪ. ಇವುಗಳ ಮಧ್ಯೆ ವನದೇವಿ ನರ್ತಿಸುತ್ತಿದ್ದಾಳೆ........ ಇದೇ ನನ್ನ ಭಾವ ಉದಯರಾಗಕ್ಕೆ........ನೀನು ಮಾಡಬೇಕಾದ ಕೆಲಸ ಹೇಳಲೋ ?"

"ಹೇಳಿ ಸಂಕೋಚವೇತಕ್ಕೆ ?"

"ನೀನು....ವನದೇವಿಯಾಗಬೇಕು....ಒಪ್ಪಿಗೆಯೋ ?"

"ನಾನೇ!"

"ಹೂ! ನಿನಗೆ ಸಂತೋಷವಿದ್ದರೆ ಆಗಬಹುದು—ನನ್ನ ಬಲವಂತಕ್ಕಾದರೆ ಬೇಡ"

"ನನ್ನ ಮಾತನ್ನು ನನಗೇ ತಿರುಗಿಸುವುದರಲ್ಲಿ ಬಹಳ ಜಾಣರು ನೀವು."

"ಆಗಬಹುದೋ ?"

"ಆಗಲಿ....ನಿಮಗಾಗಿ ಏನು ಬೇಕಾದರೂ ಮಾಡಲು ಸಿದ್ಧಳಾಗಿದ್ದೇನೆ."

"ಅದೇತಕ್ಕೆ ಉಷಾ ?"

"ಏತಕ್ಕೆಂದು ಹೇಳಲಿ ?"

ಮಾಣಿ ಅವಳ ಹತ್ತಿರ ಸರಿದು ಕುಳಿತು ಅವಳ ಕೈಗಳನ್ನು ಮೃದುವಾಗಿ ಹಿಡಿದ. ಆ ಮೃದುಸ್ಪರ್ಶದಿಂದ ಅವನ ಕೈಗಳು........ ದೇಹಾದ್ಯಂತವೂ ಕಂಪಿಸತೊಡಗಿತು. ಆ ಕೈಗಳನ್ನು ಕಣ್ಣಿಗೆ ಒತ್ತಿಕೊಂಡು ಚುಂಬಿಸಿ ದೀನದೃಷ್ಟಿಯಿಂದ ಉಷೆಯನ್ನು ನೋಡುತ್ತ

"ಉಷಾ....ಉಷಾ...."

"ಏನು ?"

"ಒಂದು ಪ್ರಾರ್ಥನೆ ಇದೆ. ಮನ್ನಿಸುವೆಯಾ ?"

"ಹೇಳಿ."

"ಈ ಬಾಳಿಗೆ ಬೆಳಕನ್ನು ತಂದೆ. ಅದು ಬೆಳಗಿ ನಾಲ್ಕು ಕಡೆ ಪಸರಿಸುವಂತೆ ಮಾಡುವೆಯಾ ?"

"ಅಂದರೆ....?"

"ನನ್ನನ್ನು....ಈ ಪಾಮರನನ್ನು....ವರಿಸುವೆಯಾ ?"

"ವರಿಸಿಯೇ ಇರುವೆನಲ್ಲಾ" ಎಂದು ನಾಚಿ ತಲೆ ತಗ್ಗಿಸಿದಳು. ಮಾಣಿಯ ಕೈಗಳು ಅವಳ ದೇಹವನ್ನಾವರಿಸಿ ಪವಿತ್ರಪ್ರೇಮದ ಪುಷ್ಪಗಳು ಚುಂಬನಗಳಾಗಿ ಅವಳನ್ನು ಆವರಿಸಿದವು. ತಾಯಿ ಕೂಗಿದ ಧ್ವನಿ ಕೇಳಿ

ಬರಲು ಉಷಾ ಗಾಬರಿಯಿಂದ ಎದ್ದಳು. ಆ ವೇಳೆಗೆ ತಾಯಿ ಬಾಗಿಲಿಗೆ ಬಂದಿದ್ದಳು.

"ಎಷ್ಟು ಬಾರಿ ಕೂಗಲಮ್ಮ.... ಏನು ಮಾಡುತ್ತಿದ್ದೆ ?"

"ತಪ್ಪು ನನ್ನದು ಮಾ. ಒಳಗೆ ಬನ್ನಿ ನಿಮ್ಮನ್ನು ಕೇಳತಕ್ಕ ಮಾತು ಒಂದಿದೆ" ಎಂದು ಮಾಣಿ ಮರುನುಡಿದ.

ಆನಂದಮಯಿ ಬಂದು ಒಂದು ಪೀಠದ ಮೇಲೆ ಕುಳಿತಳು. ಹೇಗೆ ಆರಂಭಿಸಬೇಕೆಂದು ಕಾಣದೆ ಮಾಣಿ ನೆಲವನ್ನು ಕಾಲಿನ ಬೆರಳಿನಿಂದ ಕೆರೆಯುತ್ತ ನಿಂತ. ಆನಂದಮಯಿಯೇ ಧೈರ್ಯವಿತ್ತು.

"ಹೇಳಿ ಮಹಾಶಯ, ಸಂಕೋಚವೇತಕ್ಕೆ ?"

"ನೀವು ದೊಡ್ಡ ಮನಸ್ಸು ಮಾಡಿ ನನ್ನನ್ನು ಅನುಗ್ರಹಿಸಬೇಕು."

"ಎಂತಹ ಮಾತು ಮಹಾಶಯ. ನೀವೆಂದರೇನು.... ನಾವೆಂದರೇನು ! ತಮ್ಮನ್ನು ಅನುಗ್ರಹಿಸುವ ಚೇತನವಾದರೂ ನಮ್ಮಲ್ಲಿ ಎಲ್ಲಿಂದ ಬಂತು ?"

"ಉಂಟು ತಾಯಿ. ಮನೆಯಿಲ್ಲದವನ ಮನೆ ಇದಾಯಿತು—ದಿಕ್ಕಿಲ್ಲದೆ ಬಂದವನ ದಿಕ್ಕು ನೀವಾದಿರಿ.—ಶುಷ್ಕವಾಗಿದ್ದ ನನ್ನ ಜೀವನ ನಿಮ್ಮಿಂದ ಚಿಗುರುತ್ತ ಬಂತು. ಉಷಾ ನನ್ನ ಜೀವದ ಬೆಳೆಯಾಗಿದ್ದಾಳೆ.... ಬಾಳಿನ ಬೆಳಕಾಗಿದ್ದಾಳೆ. ಅವಳನ್ನು.... ನಾನು ವರಿಸಲು ಅಪ್ಪಣೆಯಾಗಬೇಕು."

ಆನಂದಮಯಿಯ ಕಣ್ಣುಗಳು ಆನಂದಾಶ್ರುವಿನಿಂದ ನೆನೆದವು. ಉಷೆಯನ್ನು ಹತ್ತಿರ ಕರೆದು ಅಪ್ಪಿ ನೇವರಿಸಿ ಅವಳ ಕೈಯನ್ನು ಮಾಣಿಯ ಕೈಯಲ್ಲಿಟ್ಟಳು. ಮರುಕ್ಷಣವೇ ಒಲೆಯ ಮೇಲೆ ತಾನೇ ಇಟ್ಟು ಮರೆತು ಬಂದಿದ್ದ ಹಾಲನ್ನು ಜ್ಞಾಪಿಸಿಕೊಂಡು ಸಡಗರದಿಂದ ಓಡಿದಳು. ಮುದುಕಿಯ ಅಂತಃಕರಣವನ್ನೂ ಲೌಕಿಕಜ್ಞಾನವನ್ನೂ ಮಾಣಿ ಮನಸಾರೆ ಮೆಚ್ಚಿ ಅಭಿನಂದಿಸಿದ.

ಚಿತ್ರಗಳನ್ನು ಮುಗಿಸಿ ಕಳುಹಿಸಿದ ಮೇಲೆ ಆನಂದಮಯಿಯ ಮನೆಗೆ ಯಾರನ್ನಾದರೂ ಬಾಡಿಗೆಗೆ ಗೊತ್ತುಮಾಡಿ ತಾಯಿ ಮಗಳನ್ನು ಕರೆದುಕೊಂಡು ಬೆಂಗಳೂರು ಸೇರಲು ನಿಶ್ಚಯಿಸಿದ. ವಿವಾಹ ಬೆಂಗಳೂರಿನಲ್ಲಿಯೇ ಆಗಬೇಕೆಂದು ಮಾಣಿ ಹಟತೊಟ್ಟಿದ್ದ. ಎಲ್ಲ ಸಿದ್ಧತೆ ಮುಗಿಯಲು ೨—೩ ತಿಂಗಳು ಬೇಕಾಯಿತು. ನೀಲಸಿಗೆ

ಶುಭವಾರ್ತೆ ತಿಳಿಸಿ ಒಂದು ದಿವಸ ತಾಯಿ ಮಗಳೊಂದಿಗೆ ತನ್ನ ಊರಿಗೆ ಪ್ರಯಾಣ ಬೆಳಸಿದ.

ವಿವಾಹ ವಿಜೃಂಭಣೆಯಿಂದ ನಡೆದುಹೋಯಿತು. ಮೂರ್ತಿ, ರಾಯರು, ರಮೇಶರ, ಓಡಾಟವೇ ಓಡಾಟ. ರಾಯರೇ ಪತ್ನೀಸಮೇತ ಹಸೆಯ ಮೇಲೆ ಕುಳಿತು ಸೊಸೆಯನ್ನು ಆದರದಿಂದ ಬರಮಾಡಿ ಕೊಂಡರು. ವಿವಾಹಕ್ಕೆ ಬಂದಿದ್ದ ಪರಮೇಶ್ವರಯ್ಯರು ಆಗಾಗ್ಗೆ ಕಣ್ಣುಜ್ಜಿ ಕೊಳ್ಳುತ್ತ ತಾನು ದಂಡಿಸುತ್ತಿದ್ದ 'ಮಾಣಿ'ಯೇ ಈ 'ಮಣೀಂದ್ರ' ನೆಂದು ನಂಬಲು ಪ್ರಯತ್ನಿಸುತ್ತಿದ್ದ. ಅಯ್ಯರು ಭರ್ಜರಿಯಾದ ಪೀತಾಂಬರವನ್ನು ವಧುವಿಗೂ ಧೋತ್ರವನ್ನು ವರನಿಗೂ 'ಓದಿಸಿ' ಹೃತ್ಪೂರ್ವಕವಾಗಿ ಆಶೀರ್ವದಿಸಿದ. ನೀಲರಂಜನನೂ ಸಮಯಕ್ಕೆ ಸರಿಯಾಗಿ ಬಂದ. ವಧುವಿಗೆ ಮಾತ್ರ ಒಂದು ಪುಸ್ತಕವನ್ನು ಓದಿಸಿದ. ಏನಿರಬಹುದೆಂದು ಒಡೆದು ನೋಡಿದರೆ 'ಕಲಾವಿದ ಮಣೀಂದ್ರನ ಚಿತ್ರಸಂಗ್ರಹ—ಗಂಗೂಲಿಯವರ ಮುನ್ನುಡಿಯೊಂದಿಗೆ.' ಉದಯರಾಗದ ಚಿತ್ರವನ್ನು ನೋಡುತ್ತ ಉಷಾ ಮೃದುವಾಗಿ ನಕ್ಕಳು.

"ಇಂದು ನನ್ನ ಜೀವನ ತುಂಬಿತು" ಎಂದು ಮಾಣಿ ನುಡಿದ. ಅದಕ್ಕೆ ಪಕ್ಕದಲ್ಲಿಯೆ ನಿಂತಿದ್ದ ನೀಲ

"ಇಲ್ಲ ಮಾಣಿ, ಎಂದು ನೀನು ಕನ್ನಡಿಗರಿಗೊಂದು ಆದರ್ಶ ಕಲಾಭವನವನ್ನು ತೆರೆಯುವೆಯೋ ಅಂದು ನಿನ್ನ ಜೀವನ ತುಂಬುವುದು" ಎಂದು ನುಡಿದ.

ದೂರದಿಂದ ಮೃದುವಾಗಿ ಯಾರೋ ನಾಗಸ್ವರದಲ್ಲಿ 'ಭೈರವ' ವನ್ನು ನುಡಿಸುತ್ತಿರುವಂತೆ ಕೇಳಬಂತು. ಉಷೆಯ ಕಡೆ ತಿರುಗಿ ಮಾಣಿ

"ಉದಯರಾಗ, ಉದಯರಾಗ ಉಷಾ. ನಮ್ಮ ಜೀವನ ಆರಂಭ ವಾಯಿತು. ಅದು ಎಂದಿಗೂ ಅಸ್ತಮಿಸದಿರಲಿ" ಎಂದು ನುಡಿದ.



## ಅ. ನ. ಕೃಷ್ಣರಾಯರ ಗ್ರಂಥಗಳು
## ನಮ್ಮ ಪ್ರಕಟನೆಗಳು

| | | |
|---|---|---|
| ಉದಯರಾಗ | .... | ಕಾದಂಬರಿ |
| ಅಮರ ಆಗಸ್ಟ್ | .... | ,, |
| ತಾಯಿಯ ಕರುಳು | .... | ,, |
| ಜೀವನಯಾತ್ರೆ | .... | ,, |
| ಸಾಹಿತ್ಯರತ್ನ | .... | ,, |
| ಮುಯ್ಯಿಗೆ ಮುಯ್ಯಿ | .... | ,, |
| ಹೊಸಲುದಾಟಿದ ಹೆಣ್ಣು | .... | ,, |
| ಮದುವೆಯೋ ಮನೆಹಾಳೋ | .... | ನಾಟಕ |
| ಸ್ವರ್ಣಮೂರ್ತಿ | .... | ,, |
| ಹಿರಣ್ಯಕಶಿಪು | .... | ,, |
| ಮಿಂಚು | .... | ಕಥಾಸಂಗ್ರಹ |
| ಕಿಡಿ | .... | ,, |
| ಶಿಲ್ಪಿ | .... | ,, |
| ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ | .... | ,, |

### ಅಚ್ಚಿನಲ್ಲಿ

| | | |
|---|---|---|
| ರಜಪೂತ ಲಕ್ಷ್ಮಿ | .... | ನಾಟಕ |
| ಕರ್ನಾಟಕ ಕಲಾವಿದರು. ಭಾಗ ೨ | .... | ಕಲಾವಿಮರ್ಶೆ |
| ಉಮರ್ ಖಯ್ಯಂ | .... | ಕಾವ್ಯವಿಮರ್ಶೆ |
| ಕನ್ನಡಕುಲ ರಸಿಕರು | .... | ಜೀವನ ಪರಿಚಯ |
| ಸಂಧ್ಯಾರಾಗ | .... | ಕಾದಂಬರಿ |
| ಕಣ್ಣೀರು | .... | ,, |
| ಅರುಳು ಮರುಳು | .... | ,, |
| ಚಿತ್ರವಿಚಿತ್ರ | .... | ,, |

ಆನಂದ್ ಬ್ರದರ್ಸ್
ಬೆಂಗಳೂರು ೨.

## ಅ. ನ. ಕೃಷ್ಣರಾಯರ ಹೊಸ ಕಾದಂಬರಿಗಳು

( ಅಚ್ಚಿನಲ್ಲಿ )

**ಅರುಳು ಮರುಳು :** ಮರುಳು ಮಾಡುವವರಿಗೋ? ಮರುಳಿಗೆ ಈಡಾಗುವವರಿಗೋ? ಭಾರತೀಯ ಸಂಸ್ಕೃತಿಯ ಹೆಗ್ಗುರುತು ಅದರ ಧರ್ಮ. ಭಾರತ ಜೀವನದ ಪ್ರತಿಯೊಂದು ಕಣವನ್ನೂ ಧರ್ಮ ಆವರಿಸಿದೆ. ಮತ - ಮಠಗಳು ತಲೆಯೆತ್ತಿದುದು ಧರ್ಮಕ್ಕಾದ ಸೋಲು. ಈ ಸೋಲು ಹನುಮಂತನ ಬಾಲದಂತೆ ಬೆಳೆಯುತ್ತಿದೆ. ಪ್ರಾಚೀನ ಪರಂಪರೆಯ ಮಠಗಳನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡು ಧರ್ಮಕರ್ತರೆನಿಸಿಕೊಂಡವರು ಧರ್ಮದ ಅವಹೇಳನಮಾಡುತ್ತ ಬಂದಿದ್ದಾರೆ. ಇಂದು ಹೊಸ ಹೊಸ ಮಠಗಳು ಹುಟ್ಟುತ್ತಿವೆ. ಹಾದಿಗೊಬ್ಬ ಜಗದ್ಗುರು - ಬೀದಿಗೊಬ್ಬ ಮಹರ್ಷಿ. ಧರ್ಮವೂ ಇಂದು ಕಾಳಸಂತೆಗೆ ಬಂದಿದೆ. ಧರ್ಮದ ಹೆಸರಿನಲ್ಲಿ ಜನತೆಯ ಅಜ್ಞಾನಕ್ಕೆ ಪುಟಗೊಟ್ಟು ಅವರನ್ನು ಸುಲಿದು ತಿನ್ನುವ 'ಗೋಮುಖ ವ್ಯಾಘ್ರ'ಗಳ ಕರಾಳಚಿತ್ರವೇ 'ಅರುಳು ಮರುಳು.' ಆತ್ಮೋದ್ಧಾರಕ್ಕೆ ಬೇಕಾದುದು ಮತ, ಮಠಗಳ ಅನುಸರಣೆಯಲ್ಲ, ಸಚ್ಚಾರಿತ್ರ್ಯವೆಂಬುದನ್ನು ಕಾದಂಬರಿಕಾರರು ಬಿಡಿಸಿತೋರಿಸಿದ್ದಾರೆ.

**ಚಿತ್ರವಿಚಿತ್ರ :** ವಿಜ್ಞಾನಯುಗ ಜನತೆಯ ವಿಹಾರ, ವಿಕಾಸಕ್ಕೆ ಇತ್ತಿರುವ ಮಹಾಕಾಣಿಕೆ ವಾಕ್ಚಿತ್ರ. ಇದು ಇಂದು ಅಲ್ಪರ ಕೈಸೇರಿ ಅಜ್ಞಾನ ಪ್ರಸಾರ ಸಾಧನವಾಗಿದೆ. ಚಿತ್ರನಿರ್ಮಾಣದ ಆರಂಭದೆಸೆಯಿಂದ ಚಿತ್ರ ಪೂರ್ಣವಾಗುವವರೆಗೆ ನಡೆಯುವ ರಾಜಕೀಯ, ಸಂಧಾನುಸಂಧಾನ, ವಿಷಯದಾಹ ಪೂರ್ಣತೆಯನ್ನು ಚಿತ್ರಿಸುವ' ಕಾದಂಬರಿ. ಫಿಲ್ಮ್ ಸ್ಟುಡಿಯೋದ ಒಳಗಿನ ನೋಟವನ್ನೂ, ನಿರ್ಮಾತೃ, ಕಲಾವಿದ, ದಿಗ್ದರ್ಶಕ, ತಂತ್ರಜ್ಞರು ಇವರ ಅಂತರಂಗವನ್ನು ಬಿಚ್ಚಿತೋರಿಸುವ ರುದ್ರ ಮನೋಹರ ಕಾದಂಬರಿ.



## ಅ. ನ. ಕೃಷ್ಣರಾಯರು

ಇವರ ಮೊದಲನೆಯ ಕೃತಿ 'ಮದುವೆಯೋ ಮನೆಹಾಳೋ?' ನಾಟಕ ೧೯೨೪ ರಲ್ಲಿ ಪ್ರಕಟಿಸಲಾಯಿತು. ತರುವಾಯ 'ಆಹುತಿ' 'ಆದದ್ದೇನು', 'ಬಣ್ಣದ ಬೀಸಣಿಗೆ', 'ರಜಪೂತ ಲಕ್ಷ್ಮೀ', 'ಎರಡು ನಾಟಕಗಳು' 'ಜಗಜ್ಯೋತಿ ಬಸವೇಶ್ವರ' ಮೊದಲಾದ ನಾಟಕಗಳನ್ನು ರಚಿಸಿದ್ದಾರೆ. ನಾಟಕ ಸಣ್ಣಕಥೆ, ಕಾದಂಬರಿ, ವಿಮರ್ಶೆ, ಲಲಿತಕಲೆ. ಜೀವನ ಪರಿಚಯ, ಸಮಾಜವಾದಗಳ ಮೇಲೆ ಈವರೆಗೆ ಐವತ್ತು ನಾಲ್ಕು ಗ್ರಂಥಗಳನ್ನು ಬರೆದಿದ್ದಾರೆ. ಇವರ ಕಾದಂಬರಿ 'ಸಂಧ್ಯಾರಾಗ' ದೇಶವಿದೇಶಗಳಲ್ಲಿ ಖ್ಯಾತಿ ಪಡೆದಿದೆ. ವೀರಶೈವ ಧರ್ಮ, ಸಾಹಿತ್ಯ; ಸೂಫಿ ಧರ್ಮ ಸಾಹಿತ್ಯಗಳ ಬಗ್ಗೆ ವಿಶೇಷ ಪಾಂಡಿತ್ಯ ದೊರಕಿಸಿಕೊಂಡಿದ್ದಾರೆ. ಕಾಲು ಶತಮಾನದಿಂದ ಕನ್ನಡ ನಾಡಿನ ಒಕ್ಕೂಟಕ್ಕೆ ದುಡಿಯುತ್ತಾ ಬಂದಿದ್ದಾರೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ನಡೆದ ಸಾಹಿತ್ಯ, ನಾಟಕ, ಸಾಂಸ್ಕೃತಿಕ ಸಮ್ಮೇಳನಗಳ ಅಧ್ಯಕ್ಷರಾಗಿ ವಿದ್ವತ್ಪೂರ್ಣ ಭಾಷಣಗಳನ್ನು ಮಾಡಿದ್ದಾರೆ. ಈಚೆಗೆ ಇವರ 'ಹೊಸಲು ದಾಟಿದ ಹೆಣ್ಣು', 'ನಟ ಸಾರ್ವಭೌಮ' ಕಾದಂಬರಿಗಳು ಪ್ರಕಟವಾದವು. ಕನ್ನಡ ಸಾಹಿತ್ಯ ವಿಕಾಸ, ಕಲಾಪ್ರಪೂರ್ಣತೆಗೆ ಶ್ರೀಯುತರು ಮಾಡಿರುವ ಸೇವೆ ಕನ್ನಡ ಸಾಹಿತ್ಯೇತಿಹಾಸದಲ್ಲಿ ಅಮರವಾಗಿ ಉಳಿಯುವುದರಲ್ಲಿ ಸಂದೇಹವಿಲ್ಲ.

ಆನಂದ್ ಬ್ರದರ್ಸ್ : : ಬೆಂಗಳೂರು ೨